*Department of Public Instruction, Mysore*

ಮೈಸೂರು ಹೈಸ್ಕೂಲು ಐದನೆಯ ಫಾರಮ್ಮಿಗೆ,
೧೯೩೦–೩೧ನೆಯ ಸಂವತ್ಸರದಿಂದ, ಗೊತ್ತಾದ
ಕನ್ನಡ ಪದ್ಯಭಾಗ

# ಜೀವಂಧರ ಚರಿತೆ

(ಸಂಧಿ ೫, ೬, ೭)

(ಲಘು ಟಿಪ್ಪಣಿಯೊಡನೆ ಮುದ್ರಿಸಿದೆ)

ಮೈಸೂರು
ಸರ್ಕಾರದ ಬ್ರಾಂಚ್ ಮುದ್ರಣಾಲಯದಲ್ಲಿ ಮುದ್ರಿತವಾಯಿತು
೧೯೩೦

# ಸೂಚನೆ

ಈ ಪುಸ್ತಕವು ಸರ್ಕಾರದ ಬುಕ್‌ಡಿಪೋಗಳಲ್ಲಿಯೂ, ಇಲಾಖೆಯಿಂದ ನಿಯಮಿಸಲ್ಪಟ್ಟ ಏಜಂಟರುಗಳಲ್ಲಿಯೂ, ಪುಸ್ತಕವ ಮೇಲೆ ಮುದ್ರಿಸಿರುವ ಬೆಲೆಗೆ ದೊರೆಯುತ್ತದೆ. ಈ ಪುಸ್ತಕದ ಪ್ರತಿಗಳು ತಮ್ಮಲ್ಲಿ ದೊರೆಯುವುದಿಲ್ಲವೆಂದಾಗಲಿ, ಇತರರು ಈ ಪುಸ್ತಕಕ್ಕೆ ರಚಿಸಿರುವ 'ನೋಟ್ಸ'ನ್ನು ಕೊಂಡುಕೊಂಡ ಹೊರತು ಈ ಪುಸ್ತಕವನ್ನು ಮಾತ್ರವೇ ಮಾರುವುದಿಲ್ಲವೆಂದಾಗಲಿ ಹೇಳುವ, ಅಥವಾ, ಈ ಪುಸ್ತಕದ ಮೇಲೆ ಕೊಟ್ಟಿರುವ ಬೆಲೆಗಿಂತಲೂ ಹೆಚ್ಚಾದ ಬೆಲೆಯನ್ನು ಹಾಕಿ ಮಾರುವ ಏಜಂಟರು ಮೊದಲಾದವರ ಹೆಸರನ್ನೂ ವಿಳಾಸವನ್ನೂ ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರವರಿಗೆ, ಬರಹದ ಮೂಲಕ, ಕೂಡಲೆ ತಿಳಿಯಪಡಿಸಬೇಕೆಂದು ಕೋರಿದೆ.

**ಎನ್. ಎಸ್. ಸುಬ್ಬರಾವ್,**

ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್

# ತಿದ್ದುಪಡಿ

| ಪುಟ | ಪಙ್ಕ್ತಿ | ತಪ್ಪು | ಸರಿ |
|---|---|---|---|
| ೧೨ | ೧೮ | ಚಿತ್ತಕ್ಕೆ | ಚಿತ್ತಕೆ |
| ೧೬ | ೨೧ | ರಕ್ತಗ ನಿರ್ಮಾಳ | ರಕ್ತಗನಿರ್ಮಾಳ |
| ೧೭ | ೪ | ತವ | ತಪ |
| ೨೫ | ೭ | ಬೋಧಿ | ಭೋಧಿ |
| ೪೫ | ೧ | ಪಿಟವಿದೂಷಕ | ವಿಟ ವಿದೂಷಕ |
| ೪೫ | ೮ | ವರರು | ಧರರು |
| ೪೫ | ೯ | ಪಜ್ಕ್ತಿ | ಪಙ್ಕ್ತಿ |
| ೭೧ | ೨೪ | ಘ್ರೂಣ | ಘ್ರಾಣ |
| ೭೫ | ೧ | ಊತ್ಸಾಪ | ಉತ್ಸಾಹ |
| ೭೫ | ೪ | ಕಂತೆ | ಕಾಂತೆ |
| ೭೮ | ೪ | ಆಪಾರ್ಧನು | ಅಪಾರ್ಧನು— |

ಮೈಸೂರು ಹೈಸ್ಕೂಲು ಐದನೆಯ ಫಾರಮ್ಮಿಗೆ,
೧೯೩೦–೧೯೩೧ನೆಯ ಸಂವತ್ಸರದಿಂದ, ಗೊತ್ತಾದ ಪದ್ಯಭಾಗ

# ಜೀವಂಧರ ಚರಿತೆ

(ಸಂಧಿ ೫, ೬, ೭)

---

## ಪೂರ್ವ ಕಥಾ ಸೂಚನೆ

ರಾಯ ಮಗಧ ನೃಪೇಂದ್ರ ಚಂದ್ರಗ
ಜೇಯನೆನಿಪ ಸುಧರ್ಮ ಮುನಿಪನು
ವಾಯಿಯಿಂದರುಹಿದನು ಜೀವಂಧರನ ಸುಚರಿತೆಯ ॥ ೧

ರಾಜರಾಜನ ಪುರವ ನಗುತಿಹ
ರಾಜಪುರಿಯಲಿ ಸಕಲ ಮಹಿಯನು
ರಾಜಮಣಿ ಸತ್ಯಂಧರನು ಪಾಲಿಸಿದನೊಲವಿನಲಿ ॥ ೨

ದುರುಳ ಕಾಷ್ಠಾಂಗಾರಕನ ಹವ
ಣರಿದು ಸತ್ಯಂಧರನು ಮಂತ್ರೀ
ಶ್ವರನ ಮಾಡಿದ ತೆರನ ವಿವರಿಸಿದನು ಮುನೀಶ್ವರನು ॥ ೩

ಧರಣಿಯನು ಮಂತ್ರಿಗಳು ಬೇಡೆನ
ಲಿರದೆ ಕಾಷ್ಠಾಂಗಾರಗಿತ್ತಾ
ದುರುಳನಿಂದೈದಿದನು ಸತ್ಯಂಧರನು ಸುರಪುರವ ॥ ೪

---

# ಐದನೆಯ ಸಂಧಿ

ಸೂಚನೆ ॥ ವನದೊಳುದಿಸಿ ವಣಿಗ್ವರೇಂದ್ರನ
ಮನೆಯೊಳೊಲವಿಂ ಬಳೆದು ವಿದ್ಯಾದಿ
ಘನ ವಿಶಾರದನಾಗಿ ಜೀವಂಧರನು ರಂಜಿಸಿದ ॥

ಧರಣಿಪತಿ ಕೇಳಿಂತು ಸತ್ಯಂ
ಧರನು ನಾಕಸ್ತ್ರೀಯರಲಿ ತಾ
ನೆರೆಯೆ ಪುರಜನ ಪರಿಜನವು ಶೋಕಾಬ್ಧಿಯಲಿ ಮುಳುಗಿ ।
ಅರೆಗಳಿಗೆಗವನೀಶ ಸಹಿತೈ
ಶ್ವರಿಯ ಸಂಪದವಳಿದುದಕಟಾ
ನರರ ಸಂಸಾರವಧು ತಾನಸ್ಥಿರವು ನೋಡಲೆಂದ ॥ ೧

ಪುರದ ಪುಣ್ಯದ ಪುರುಷ ರೂಪಿಂ
ದುರಿದು ಹೋದುದು ಸಕಲ ಪುರಜನ
ಪರಿಜನದ ಸೌಭಾಗ್ಯವಿಂದಗಲಿತ್ತು ಕಲ್ಪ ಕುಜ ।
ಧರೆಗೊರಗಿತಿಂದಖಿಳ ಧರಣೀ
ಶ್ವರರ ಚೂಡಾರತ್ನವಿಂದೊಡೆ
ದುರುಳಿದುದು ಹಾಯೆಂದು ಗೋಳಿಟ್ಟಳಲಿತಖಿಳ ಜನ ॥ ೨

ಹರನ ಸ್ವಮನಮರೇಂದ್ರನ್ನೆಣಿ ಮುರ
ಹರನ ಪಾಟಿ ಜಯಂತನೊರೆ ಭಾ
ಸ್ಕರನ ಜ್ಯೋತಿಡು ಮೃಗಾಂಕ ನಿಭ ದಶರಥ ತನೂಭವನ

ಸರಿ ಪಿತಾಮಹನೀಡು ತಾನೆನಿ
ಪರಸ ನಿಮಿಷಕೆ ಕೆಟ್ಟನೆನೆ ಹುಲು
ನರರ ಸಂಸಾರವನು ಸುಡಲೆಂದಳಲಿತಖಿಳ ಜನ ॥ ೩

ಹೊಳೆವ ಮಣಿಮಯ ಹರ್ಮ್ಯದೊಳು ಕೋ
ಮಳೆಯರೊಡನೆ ವಿಲೋಲ ಹಂಸಾ
ವಳಿಯ ತಲ್ಪದ ಮೇಲೆ ಪವಡಿಸಿದಾ ನೃಪೋತ್ತಮನು ।
ಕಳನೊಳಗೆ ಭೂತಾಳಿ ಸುತ್ತಲು
ಬಳಸಿ ಬರೆ ಹರಳೊತ್ತೆ ಸುಡುಗಾ
ಡೊಳಗೆ ಮಲಗಿದನಕಟ ಹಾಯೆಂದಳಲಿತಖಿಳ ಜನ ॥ ೪

ಸುದತಿಗೂಡಿಂದರಸ ಪೂರ್ವಾ
ಹ್ಣದಲಿ ಸೌಖ್ಯದೊಳಿರ್ದುಮಪರಾ
ಹ್ಣದಲಿ ತಾನಿಂತಾದ ನೋಡುತ್ತಿರಲು ಲೋಕದಲಿ ।
ವಿಧಿಯ ಮೀರುವರಾರು ಕೆಡುವೀ
ಬದುಕಿಗೋಸುಗ ಲೋಭ ಮಾಯಾ
ಮದದೊಳೊಂದಿಹುದೇಕೆ ಜಗವೆಂದಳಲಿತಖಿಳ ಜನ ॥ ೫

ಕೆಲರು ಖಳನಿವನೆಂದಮಾತ್ಯರು ।
ತಿಳುಹೆ ಕಾಷ್ಠಾಂಗಾರಗರಿದರಿ
ದಿಣ್ಣೆಯೊಸಗಿ ತನ್ನಿಂದ ತಾನೇ ಕೆಟ್ಟನಕಟೆಂದು ।
ಕೆಲರು ಹಾವಿಗೆ ಹಾಲೆರೆದು ನೆರೆ
ಸಲಹೆ ವಿಷ ಮೇಲಪ್ಪುದಂತಾ
ಖಳರ ಸಾಕಿದ ನೃಪರಿಗಿನಿತೆಂದಳಲಿತಖಿಳ ಜನ ॥ ೬

ಧರಣೀ ಪತಿ ಕೇಳಿತ್ತ ಸತ್ಯಂ
ಧರನು ಬಿಟ್ಟ ಮಯೂರ ಯಂತ್ರವು
ಧರದಿ ಕೊಂಡುಯ್ದಾ ಪುರದ ಸುಡುಗಾಡಿನೊಳಗಿಳುಹೆ ।
ತರುಣಿ ಮೆಲ್ಲನೆ ಕಣ್ದೆರೆದು ಚೇ
ತರಿಸಿ ದಶ ದಿಕ್ಕುಗಳನಾರೈ
ದರಸನನು ತಾ ನೋಡಿ ಕಾಣದೆ ಮರುಗಿದಳು ಕಾಂತೆ ॥ ೭

ಹಾ ರಮಣ ಹಾ ವಿಬುಧಜನ ಮಂ
ದಾರ ಹಾಹಾ ಶತ್ರುಕುಲ ಸಂ
ಹಾರ ಹಾ ಗಂಭೀರ ಪ್ರಾರಾವಾರ ಹಾ ಕಾಂತ ।
ಹಾ ರಸಿಕ ಹಾ ಸುಭಗ ಧೀರೋ
ದಾರ ಹಾಹಾ ನವ್ಯ ಮದನಾ
ಕಾರ ಹಾಹಾಯೆಂದು ಹಂಬಲಿಸಿದಳು ಹರಿಣಾಕ್ಷಿ ॥ ೮

ಎಲ್ಲಿ ಮಗ್ಗಿದೆ ನೃಪ ಶಿರೋಮಣಿ
ಯೆಲ್ಲಿಹೋದುದು ನಿನ್ನ ಸಿರಿ ಬಳಿ
ಕೆಲ್ಲಿಯಗಲಿತು ನಿನ್ನ ಘನ ಸಪ್ತಾಂಗ ಸಂದೋಹ ।
ಎಲ್ಲಿಯುಡಗಿತು ನಿನ್ನ ವಿಭವವ
ದೆಲ್ಲಿ ತೊಲಗಿತು ರೂಪು ಸದ್ಗುಣ
ವೆಲ್ಲಿ ಕರಗಿತು ಹೇಳೆನುತ ಹಲುಬಿದಳು ಹರಿಣಾಕ್ಷಿ ॥ ೯

ಅರಸ ಕೇಳಾ ತರುಣಿಯುಕ್ತಿಯ
ಸರದ ಬಳಿವಿಡಿದಲ್ಲಿಗತಿ ಭೀ
ಕರ ಮೃಗಂಗಳ ನಿವಹ ತಾ ಬಂದೊಲಿದು ಕಿವಿಗೊಟ್ಟು ।

ದುಗುಳ ತನಗಳನುಳಿದು ಮೋಹವ
ತೊರೆದು ಕೇಳುತ್ತಿರಲು ಸತಿ ಭೂ
ವರನ ಕೇಳಿದಳವನಿ ಪತಿಯ ವಿಯೋಗ ವಿಕಳದಲಿ ॥ ೧೦

ಅರಸ ಕೇಳ್ ಬಲ ಧೈರ್ಯಯುತ ಸ
ತ್ಪುರುಷನೆನಿಪ ರಘೂದ್ವಹನು ಪ
ನ್ನರಸಿಯ ವಿಯೋಗದಲಿ ನೆರೆ ಕಳವಳಿಸಿ ಕಂಡವನು ।
ತರುಣಿಯನು ಬೆಸಗೊಂಡನೆನಲತಿ
ತರಳೆ ಮುಗ್ಧೆಯು ಪತಿ ವಿಯೋಗದಿ
ಮರುಳಹುದಿದೇನಚ್ಚರಿಯೊ ಭೂಪಾಲ ಕೇಳೆಂದ ॥ ೧೧

ಬಳಿಕ ಕೇಕೀ ಯಂತ್ರದಿಂದಿಳಿ
ದಲಘು ಕುಚಕೆ ಕಂಗೆಟ್ಟು ಪುರವಿದು
ಹಳುವವಾದುದು ನಿಳಯ ಸುಡುಗಾಡಾಯ್ತಿದೇಕೆನುತ ।
ಕಳವಳಿಸಿ ನಾನಾರೊ ಪತಿಯೇ
ಕುಳಿದನೋ ನೋಡುವೆನೆನುತಲಾ
ಬಳಿಯೊಳರಿಸಿದಳು ವನದಲಿ ಮುಗ್ಧೆ ವಿಕಳದಲಿ ॥ ೧೨

ಲಲನೆಯೊಬ್ಬಳನಡವಿಯಲಿ ನೀ
ನುಳಿವರೇ ಹೇಳಕಟ ಮರದಿಂ
ದಿಳೆಗೆ ಬಿದ್ದವರುಳಿವರೇ ಲೋಕದಲಿ ದೇಹಗಳ ।
ನೆಳಲು ತಾ ಬೇರುಂಟೆ ಬರಿದೇ
ಕಿಳೆಯ ಪತಿ ನೀನಿಂತು ಬಿಡಲುಸು
ತೊಲಗದಿಹುದೇ ತನಗೆ ಹೇಳೆಂದಳಲಿದಳು ರಮಣಿ ॥ ೧೩

ಹಳುವದೊಳಗಾನರಸೆ।ನೀನಿ।
ಮೆಳೆಯೊಳಡಗಿರ್ದೆನ್ನ।ನಿನ್ನಯ।
ಬಳಿಗೆ। ಕರೆದೊಡೆ। ಕುಂದೆ। ನ್ನಾ।ನಿನಗಹಿತವೆಸಗಿದೊಡೆ ।
ಉಳಿವುದುಚಿತವೆ।ಬರಿ ವೆರೆಯೊನ್ನೊಳು
ಸೆಳಸಿದೇಕೆಂದೆನುತ ಸತಿ ಹಂ
ಬಲಿಸುತಿರ್ದಳು ಕಳವಳಿಸಿ ಕರೆ ಕರೆದು ಭೂ ಭುಜನ ॥ ೧೪

ಪುರುಷ।ಹಾಯೆಂದೆನುತ।ಮಾರುತ।
ಗಿರಿಕೆನಲು। ನೃಪನೆನುತ। ಕೈಗಳ
ನುರುತರದಿ ಮುಗಿಯುತ್ತ। ಮೃದು ಪಾದಂಗಳಲಿ।ಮುಳ್ಳು ।
ಮುರಿಯಲೇನೆಂದರಿಯಳಕಟಾ
ಒರಲುತಾಹಾಯೆನುತ ವಿಪಿನಾಂ
ತರದೊಳರಸುತ್ತಿರ್ದಳಾ ಸತಿ ಪತಿಯ ವಿಕಳದಲಿ ॥ ೧೫

ನಟ್ಟಡವಿಯಲಿ।ನೀನು।ವೈರಿ ಘು
ರಟ್ಟ। ಕೇಳ್।ನಿಷ್ಕರುಣದಿಂ।ನೆರೆ।
ಬಿಟ್ಟು ಹೋಗಲು। ನಿನ್ನ।ಪದವೆಂತಿದುಗ್ಗದಕಟ್ಟೆನ್ನ। ।
ನಿಟ್ಟೆಗೊಂಡಗಲಿಸಿತು।ರಾಜ
ಶ್ರೇಷ್ಠ।ನೀ।ಮೈದೋರಿ।ಕರುಣಾ
ದೃಷ್ಟಿಯಲಿ।ನೋಡೆನ್ನನೆಂದಳಲಿದಳು। ಕಮಲಾಕ್ಷಿ। ॥ ೧೬

ಕರಿಯೆ।ಕರಿಪತಿ ಯಾನನನು।ಹರಿ ।
ಹರಿ। ಸಹಸ್ರಬಲಾನ್ವಿತನ। ಪಿಕ
ವರ। ಪಿಕಾಳಾಪನನು।ಚಕ್ರವೆ।ಚಕ್ರಧರ ನಿಭನ। ।

ಹರಿಣ ಹರಿಣಾಂಕಾಸ್ಯನನು ಧಾ
ಸುರ ಶುಕವೆ ಶುಕ ವಾಣಿಯನು ವಿ
ಸ್ತರದಿ ತೋರೆನಗೆಂದು ಸತಿ ಕೇಳಿದಳು ಪಕ್ಷಿಗಳ ॥ ೧೭

ಅಲಕ ನೀ ತೋರಖಿಲ ಭೂಮಿಪ
ತಿಲಕನನು ವಿಮಲಾರ್ಜುನವೆ ದೋ
ರ್ಬಲ ಜಿತಾರ್ಜುನನನು ಸುಕೇತಕಿ ವಿಜಯ ಕೇತನನ
ಲಲಿತ ಕಂಕೆಲಿ ದ್ರುಮವೆ ನೀ ತೋ
ರೊಲಿದು ಕಂಕಲಿ ಪ್ರಿಯನನೆಂದಾ
ಅಳಿ ಕುಳಾಳಕೆ ತರುಗಳನು ಬೆಸಗೊಂಡಳವನಿಪನ ॥ ೧೮

ತರುಣಿಯಿಂತಿನಿಯನ ವಿಯೋಗಾಂ
ತರದಿ ನೆರೆ ಕಳವಳಿಸಿ ತಾ ಕಂ
ಡರನಿರದೆ ಕೇಳುತ್ತ ಧೈರ್ಯವ ತಳೆದು ತತ್ಕಾಂತೆ
ದುರುಳ ಕಾಷ್ಠಾಂಗಾರನಿಂ ಸುರ
ಪುರಕೆ ಸರಿದನೊ ತಿಳಿಯದೆಂದಾ
ತರುಣಿ ತತ್ಪ್ರೇತಾವನಿಗೆ ತಿರುಗಿದಳು ಶೋಕದಲಿ ॥ ೧೯

ವರ ವಿಚಿತ್ರ ವಿತಾನಮಯ ಮಂ
ದಿರದೊಳಚಲೆಯುರಂಘ್ರಿಗಳ ವಿ
ಸ್ತರದೊಳೊತ್ತಲು ಅಂಚೆವಾಸಿನ ಮೇಲೆ ಪವಡಿಸುವ
ಪುರುಷ ನೀ ನೆಣ ನೆತ್ತರೊಳು ಭೂ
ತರುಣಿಯನು ನೆರೆ ಮೆಚ್ಚಿ ಬಿಡದಾ
ಧರೆಯನಪ್ಪಿದೆಯೆಂದು ಮನದೊಳು ಮರುಗಿದಳು ರಮಣಿ ॥ ೨೦

ಅಂಬುಜಾನನೆ ಭೂಮಿಪನ ಚಿಂ
ತಾಂಬುಧಿಯೊಳೋಲಾಡುತಿರೆ ನೆರೆ
ತುಂಬಿದುದು ನವ ಮಾಸ ವರ ಶುಭ ಲಗ್ನ ಸಮಯದಲಿ ।
ಕಂಬು ಕಂಧರೆ ಸೂರ್ಯಗೆಣೆಯೆಂ
ದೆಂಬ ಸುಕುಮಾರಕನ ಪಡೆದುರೆ
ಹಂಬಲಿಸುತಿರ್ದಳು ಮಹೀಶನ ನೆನೆದು ಶೋಕದಲಿ ॥ ೨೧

ಸಾರ ಚಂದ್ರೋಪಲದ ರಮ್ಯಾ
ಗಾರದಲಿ ಸುಕುಮಾರ ನೀನವ
ತಾರಿಸದೆ ಸುಡುಗಾಡಿನಲಿ ಬಂದುದಿಸುವರೆ ಕಂದ ।
ಚಾರು ಪುಣ್ಯಾತ್ಮಕರ ಬಸಿರಲಿ
ಬಾರದತಿ ಪಾಪಾನ್ವಿತೆಗೆ ಸುಕು
ಮಾರ ನೀನುದಿಸುವರೆ ಹೇಳೆಂದಳಲಿದಳು ರಮಣಿ ॥ ೨೨

ಬಾಲಕನೆ ನಾ ನಿನ್ನ ಜಠರಕೆ
ಹಾಲು ಬೆಣ್ಣೆಯನೆಲ್ಲಿ ತರುವೆನು
ಗೋಳನೀಕ್ಷಿಸಲಾರೆನಾವಂದದಲಿ ನಾ ನಿನ್ನ ।
ಪಾಲಿಸುವೆನೆಲ್ಲಿರಿಸುವೆನು ಬಿರು
ಗಾಳಿಗಳಿಗಾನೆಲ್ಲಿಗುಯ್ವೆನು ।
ಪೇಳು ಕಂದಯ್ಯನುತ್ತ ಮುಂಡಾಡಿದಳು ನಂದನನ ॥ ೨೩

ಸರಸಿಜಾಂಬಕಿಯಿಂತು ಮರುಗು
ತ್ತಿರೆ ಕುಮಾರನ ಪುಣ್ಯದೇವತೆ
ಯುರುತರದಿ ತದ್ಧಾತ್ರಿ ವೇಷದಿ ಬರಲು ಕಂಡಬಲೆ ।

ಹರಣ| ಬಂದಂತಿಲ್ಲಗೆಂತೆಲೆ|
ತರುಣಿ| ಬಂದೆಯೆನುತ್ತ| ಶೋಕಿಸು
ತಿರಲು| ದೇವತೆ| ನುಡಿದಳಾಕೆಗೆ| ದಾಧಿಯಂದದಲಿ || ೨೪

ಬಾಲೆ| ನೀನಿನ್ನಳಲಬೇಡೀ
ಬಾಲಕಗೆ| ಶುಭ ಲಕ್ಷಣದ| ರೇ
ಖಾಳಿಯಿವೆ| ನೀ ನೋಡು |ತಾನಿವನಖಿಳ| ಶತ್ರುಗಳ| |
ಸೀಳಿ| ತನ್ನ| ಸಮಸ್ತ| ರಾಜ್ಯವ|
ಪಾಲಿಸುವನಿದು| ತಪ್ಪದೆಂದಾ|
ನೀಲ ಕುಂತಲೆಗರುಹಿ| ನುಡಿದಳು| ಮತ್ತೆ| ವಿನಯದಲಿ || ೨೫

ತರುಣಿಯೊಳಿಂತಿಲ್ಲಿ |ನಾವಿ|
ನ್ನಿರಲದೊರ್ವ| ಮಹಾತ್ಮ ಬಂದೀ|
ತರುಣನನು| ಕೊಂಡಯ್ದು| ಸಲಹುವನಾತನಿಂದಿಳೆಗೆ| |
ಅರಸಹನು| ನೀನಾತನೆಯ್ದಿ
ತ್ತಿರಲು| ಬೇಡೆನಬೇಡವೆಂದೀ|
ಪರಿಯಲಾಕೆಯ| ತಿಳುಹೆ |ಹಾರೈಯಿಂದಳಲಿದಳು ರಮಣಿ| ೨೬

ತರುಣ| ನಿನ್ನನು| ಸಾಕಲಾರದೆ|
ಪರರಿಗೀವಂತಾಯ್ತು| ಹಾಯೆಂ
ದರಸಿ |ಗೋಳಿಟ್ಟಳಲಿ ತದ್ಬಾಲಕನ| ಹಣೆ |ಹಣೆಯ| |
ಹೊರಿಸಿ| ನೆರೆ| ಮುಂಡಾಡಿ| ತನ್ನಯ|
ಬೆರಲ| ಮಣಿ ಮುದ್ರಿಕೆಯ| ತೆಗೆದು|
ಬುರುಹ ಮುಖಿ| ಸುತಗಿಟ್ಟು| ತೊಲಗಿದಳೊಂದು| ಬಾಹೆಯಲಿ|| ೨೭

ಅರಸ ಕೇಳಾ ಪುರದ ವೈಶ್ಯರಿ
ಗರಸೆನಿಪ ಗಂಧೋತ್ಕಟಂಗವ
ತರಿಸಿದಾತ್ಮಜನಳಿಯಲಾ ನೃಪ ಸುವ್ರತಾಖ್ಯ ಮುನಿ ।
ಬರಲೆರಗಿ ತನಗುದಯಿಸಿದ ಪು
ತ್ರರು ನಿರಾಯುಷರೇಕೆ ತನಗೀ
ತೆರನ ಹೇಳೆನೆ ಕರ್ಮವಶ ತಾನೆಂದನಾ ಮುನಿಪ ॥ ೨೮

ಅಳಲಬೇಡೆಲೆ ವೈಶ್ಯ ನೀನಿದ
ತಳೆದು ಕಾಡೊಳು ಬಿಸುಟ ಬಳಿಕಾ
ಸ್ಥಳದೊಳರಸೆ ಕುಮಾರ ಕೈವಶವಪ್ಪನೆಂದು ಮುನಿ ।
ತಿಳುಹೆ ತತ್ಪ್ರೇತಾವನಿಗೆ ದೋ
ರ್ವಲನು ಮೃತ ಶಿಶು ಸಹಿತ ಬರೆ ಕಂ
ಡೊಲಿದು ವಿಜಯಾವತಿಗೆ ಸತಿ ತೋರಿದಳು ಬೆರಳಿನಲಿ ॥ ೨೯

ಆ ವಣಿಗ್ವರನದನು ತತ್ಪ್ರೇ
ತಾವನಿಯೊಳಿಟ್ಟಲ್ಲಿ ಮುನಿ ಪೇ
ಳ್ದಾ ವಿಧದಿ ನೋಡಲ್ಕೆ ನಿರ್ಧನ ಮಣಿಯ ಪಡೆದಂತೆ ।
ಕಾವು ಕಾವಿಂದಳುತಲಖಿಳ ದಿ
ಶಾವಳಿಯ ನೋಡುತ್ತ ಶಿಶುಗಳ
ದೇವನಂತಿಹ ರಾಜ ಶಿಶುವನು ಕಂಡು ಮರುಗಿದನು ॥ ೩೦

ಪರುಷವೋ ಕೌಸ್ತುಭವೊ ನವ ಕಡ
ವರವೊ ಬಿಂಬದ ಮರಿಯೊ ನವ ಕಂ
ಡರಣಿಯೋ ಶಿಶುಗಳ ಲಲಾಮವೊ ಸಕಲ ಲಕ್ಷಣದ ।

ತರುಣ ಮನಸಿಜ ಬಾಲಕಾಕೃತಿ
ಧರಿಸಿ ಬಂದವನಲ್ಲದಿರೆ ಮ
ರ್ತ್ಯರಿಗಿನಿತು ಸೊಬಗಿಲ್ಲೆನುತ ತಲೆದೂಗಿದನು ವೈಶ್ಯ ॥ ೩೧

ಮನ ದಣಿಯಲಾ ಶಿಶುವನಾಲೋ
ಕನವೆಸಗಿ ಬಿಗಿಯಪ್ಪಿಕೊಂಡಿ
ನ್ನೆನಗೆ ತೃಣ ತ್ರೈಲೋಕ್ಯ ರಾಜ್ಯವದೇಕೆ ಸಿರಿಯೇಕೆ ।
ತನಯಗೆನ್ನೊಳು ಋಣ ವಿಶೇಷವಿ
ದೆನುತ ಮುನಿ ರೂಪಿಸಿದ ಮಾತುಗ
ಳೆನಗೆ ಸಾಮ್ಯವದಾಯ್ತೆನುತಲುಬ್ಬಿದನು ಹರುಷದಲಿ ॥ ೩೨

ತರುಣನನು ಕಂಡಿಂತು ಹರುಷದೊ
ಳಿರಲು ವಿಜಯಾವತಿ ನಿರೀಕ್ಷಿಸಿ
ಕರಗಿ ಶಿಶು ಸೀನಲು ಮಹಾಸ್ಥಿರ ಜೀವಿಯಾಗೆಂದು ।
ಹರಸಲಾರೆಂದೀಕ್ಷಿಸಿ ವಣಿ
ಗ್ವರನು ಕಾಣದೆ ಬಳಿಕ ಜೀವಂ
ಧರನು ಹೆಸರೆಂದಿಟ್ಟು ಮನೆಗೈತಂದ ಹರುಷದಲಿ ॥ ೩೩

ಸರಸಿಜಾಂಬಕಿ ನಿನಗೆ ಹಿಂದ್ಧವ
ತರಿಸಿದಖಿಲಾತ್ಮಜರ ಜೀವದೊ
ಳಿರದೆ ಕಾಡೊಳು ಬಿಸುಟೆ ನಾ ನಿನಗೀ ಮೃತಾರ್ಭಕನ ।
ಭರದಿ ಮಸಣದೊಳಿಳುಹಲಿದ್ಧಕಸು
ವೆರಸೆ ಮಗುಳ್ದಿದ ತಂಧೆ ನೋಡೆಂ
ದರಸ ಕೈವಿಡಿದ್ಧಂತೆ ಕಪಟದಿ ನುಡಿದನಾ ವೈಶ್ಯ ॥ ೩೪

ಪುರುಷನೀ ಪರಿ ನುಡಿಯೆ ತೊಲಗಿದ
ಹರಣ ಬಂದಂದದಲಿ ಹರುಷದ
ಶರಧಿಯೊಳಗೋಲಾಡಿ ಕಂಗಳೊಳಃ ೦ವೊರೆಯೆ ।
ತರುಣನನು ಬಿಗಿಯಪ್ಪಿ ತೂಪಿರಿ
ದರುಹನನು ನೆನೆದಬಲೆ ನಾನಾ
ಪರಿಯ ಶಾಂತಿಯನಾ ಕ್ಷಣದೆ ಮಾಡಿಸಿದಳೊಲವಿನಲಿ ॥ ೩೫

ಅರಸ ಕೇಳ್ ವಿಜಯಾವತಿಯು ಪರಿ
ಸರದೊಳಿತ್ತಲು ಪುಣ್ಯದೇವತೆ
ಯುರುತರದಿ ತದ್ಧಾತ್ರಿ ವೇಷದಿ ಬಂದು ಕಂಡಬಲೆ ।
ಭರವಶದಿ ಕೊಂಡುಯ್ದು ತಪವಾ
ಚರಿಪ ಮುನಿಗಳ ಸನ್ನಿಧಿಯೊಳಿರಿಲಿ
ರಿರಿಸಿ ತಾನೆಯದೃಶ್ಯವಾದಳು ಭೂಪ ಕೇಳೆಂದ ॥ ೩೬

ಬಳಿಕಲಂಭೋಜಾಕ್ಷಿ ದಾದಿಯ
ಸುಳುಹ ಕಾಣದೆ ತನ್ನ ನಡವಿಯೊ
ಳುಳಿದು ಹೋದಳು ಹಾಯೆನುತ ಶೋಕಾಂಬುನಿಧಿಯೊಳಗೆ ।
ಮುಳುಗಿ ಮೂರ್ಛಿತೆಯಾಗಿ ತನ್ನಿಂ
ತಿಳಿದು ಶೋಕವನಪಹರಿಸಿ ಕೋ
ಮಳೆ ವಿವೇಕ ಸ್ತ್ರೀಯ ಚಿತ್ತಕ್ಕೆ ಮಾರಿದಳು ಮನವ ॥ ೩೭

ತನಯನನು ತಾ ಹೃದಯದೊಳಗಿ
ಟ್ಟನವರತ ಸರ್ವಜ್ಞ ಹೃದ್ಧಾ
ವನೆಯ ಮಾಡುತ ದೇವತಾನ್ನವನುಂಬ ಸುಕುಮಾರಿ ।

ವಿನುತ ತೃಣ ಧಾನ್ಯದಲಿ ಪಾಕವ
ನ್ನನುಕರಿಸಿ ಜೀವಿಸುತಲಾ ಕಾ
ನನದಿ ತಾಪಸಿಯಾಗಿ ಸತಿಯಿಂತಿರ್ದಳೊಲವಿನಲಿ ॥ ೩೮

ನಿಳಯದೊಳು ಸುಳಿದಾಡಲಾರದ
ಲಲನೆ ವನಕೈದಿದಳು ಮಂದಾ
ನಿಲಗೆ ಹೆದರುವಳೊಂದಿದಳು ಬಿರುಗಾಳಿಯೊಳು ಮಣಿಯ
ಬೆಳಗಿಗಂಜುವ ರಮಣಿ ರವಿ ರುಚಿ
ಯೊಳಗೆ ಮುಗ್ಗಿದಳಕಟ ವಿಧಿಯನು
ಕಳೆವರಾರೆಂದಳಲಿತಬಲೆಯ ನೋಡಿ ಸುರ ನಿಕರ ॥ ೩೯

ಧರಣಿ ಪತಿ ಕೇಳಿತ್ತಲಾ ಪುರ
ವರದೊಳಗೆ ಗಂಧೋತ್ಕಟನು ಕಡು
ಹರುಷದಲಿ ಪುತ್ರೋತ್ಸವವ ಮಾಡಿಸಿದನಾ ದಿವಸ
ದುರುಳ ಕಾಷ್ಠಾಂಗಾರನತಿ ವಿ
ಸ್ತರದಿ ರಾಜ್ಯದ ಪಟ್ಟವನು ತಾ
ಧರಿಸಿ ಬಳಿಕಾ ಕ್ಷಣವೆ ದೂತರ ಕರೆದು ನೇಮಿಸಿದ ॥ ೪೦

ಪೌರಜನರಿಷ್ಟವನು ನಿಜಪರಿ
ವಾರ ಸನ್ನುತ ಸಚಿವರಂತ
ಸ್ಸಾರವನು ಪರಿಜನದ ಗುಜಿಗುಜಿನ ಪ್ರವರ್ತನೆಯ
ಆರಯಿದು ಬಂದರುಹಿ ನೀವೆನ
ಲೂರೊಳದನಾರೈದು ಕಾಷ್ಠಾಂ
ಗಾರಗಂತಾ ಹದನ ಚರರರುಹಿದರು ವಿನಯದಲಿ ॥ ೪೧

ಸುರುಚಿರದಿ ಗಂಧೋತ್ಕಟನ ಮಂ
ದಿರದೊಳಾದುತ್ಸವವದಲ್ಲದೆ
ಪುರದೊಳಗೆ ಸತ್ಯಂಧರನು ಮಡಿದುದಕೆ ಶೋಕಿಸದ |
ನರನ್ನದೊರ್ವನ ಕಾಣೆವೆನಲ
ಚ್ಚರಿಯಿದೆಂದಾ ಖಳನು ಬೇಗದಿ
ಕರೆಸಿ ಗಂಧೋತ್ಕಟಗೆ ಕಾಷ್ಠಾಂಗಾರನಿಂತೆಂದ || ೪೨

ಹೊಳಲೊಳಿಲ್ಲದ ವಿಭವ ನಿನ್ನಯ
ನಿಳಯದೊಳಗಿಂದೇನೆನಲು ನೀ
ವಿಳೆಯ ಪಟ್ಟವನಾಂತ ಸಂತಸದಲಿ ಮಹೋತ್ಸವವ |
ಒಲವಿನಲಿ ಮಾಡಿಸಿದೆನೆನೆ ಖಳ
ತಿಲಕರಾಗಿಸಿ ಮೆಚ್ಚಿ ಧನವಿ
ತ್ತೊಲಿದುದನು ಬೇಡೆನೆ ವಣಿಗ್ವರನಾತಗಿಂತೆಂದ || ೪೩

ಎನಗೆ ಸುತನಿಂದುದಯಿಸಿದನೀ
ದಿನದಿ ಜನಿಸಿದ ಪುರದ ವೈಶ್ಯರ
ತನಯರೆನ್ನಾತ್ಮಜನ ಸಂಗಡ ಬಳೆಯಬೇಕೆನಲು |
ಜನಪನಾಜ್ಞೆಯೊಳಂದು ಪುರದಲಿ
ಜನಿಸಿದೈನೂರ್ವರು ಕುಮಾರಕ
ರನಿಬರಾತನ ಮನೆಯೊಳೆಸೆದರು ಭೂಪ ಕೇಳೆಂದ || ೪೪

ಅರಸ ಕೇಳೈನೂರ್ವರಿಗೆ ಭೂ
ಸುರರ ಮತದಿಂ ಜಾತ ಕರ್ಮವ
ವಿರಚಿಸುತೆ ಮೇಣ್ ನಾಮಕರಣಾದಿಗಳನನುಕರಿಸಿ |

ಪರಿ ಪರಿಯ ಹೊಂದೊಡಿಗೆ ಚೀನಾಂ
ಬರಗಳಿಂದಾ ವೈಶ್ಯ ಮುದದಿಂ
ಹೊರೆಯುತಿರ್ದನು ತನ್ನ ಸತಿ ಸಹಿತಾ ಕುಮಾರಕರ ॥ ೪೫

ಹರಿಣ ಪಕ್ಷದ ಚಂದ್ರನಂತುರು
ತರದ ಚಂದನ ಕಲ್ಪ ಕುಜ ಕ
ಪ್ಪುರದ ಶಶಿಕಾಂತಾಯತಂಗಳ ವಿಧದಿ ಚಂದ್ರಿಕೆಯು ।
ಕರುವಿನಂತೆಳದಳಿರಿನಂತೈ
ಶ್ವರಿಯ ಧರ್ಮ ಸುಕೇತು ಬಳೆದಾ
ಪರಿಯ ಜೀವಂಧರನು ಬಳೆಯುತ್ತಿರ್ದನೊಲವಿನಲಿ ॥ ೪೬

ನಡೆಗಲಿತ ಸ್ಯಾದ್ವಾದ ಮಾರ್ಗದಿ
ನುಡಿಗಲಿತ ಜಿನ ಧರ್ಮ ಶಾಸ್ತ್ರದಿ
ಯುಡಲು ತೊಡಲುಣ ಕಲಿತ ಸರ್ವೇಶ್ವರನ ಬೇಳುಡೆಯ ।
ಇಡಿದ ಭಿತ್ತಿಯ ಚಿತ್ರಗಳ ಮಿಗೆ
ಹಿಡಿದುಕೊಡು ತನಗೆಂದು ದಾದಿಯ
ಬಿಡದೆ ಕಾಡುತಲಾ ಕುಮಾರಕ ಬಳೆದನೊಲವಿನಲಿ ॥ ೪೭

ವಿನುತ ಜೀವಂಧರನು ಮೊದಲಾ
ದನಿಬರಿಗೆಯುಪನಯನವನು ತಾ
ನನುಕರಿಸೆ ನಂದಿಯೆನಿಸುವ ಮುನಿ ಬಂದನೊಲವಿನಲಿ ।
ಸನುನಯದೊಳೈನೂರ್ವರಿಗೆ ಸಾ
ಧನವೆನಿಪ ಚೌಷಷ್ಟಿ ವಿದ್ಯೆಯ
ನನಿತುವನು ಕಲಿಸಿದನು ಭೂಮಿಪಾಲ ಕೇಳೆಂದ ॥ ೪೮

ಬಳಿಕ ಜೀವಂಧರನು ತನಗು
ಜ್ಜ್ವಳಿಪ ವಿದ್ಯಾಳಿಯನ್ನನಿತುವನು
ಕಲಿಸಿದಾರ್ಯಾನಂದಿ ಮುನಿಪನ ನಿಜ ಕುಲೋನ್ನತಿಯ ।
ತಿಳಿಯಬೇಕೆಂದಿರೆ ಕುಮಾರನ
ಸುಲಲಿತಾಭ್ಯಂತರವನರಿದವ
ಗೊಲಿದು ತಿಳುಹುವೆನೊಂದುಪಾಯದೊಳೆಂದು ಮುನಿ ನುಡಿದ॥

ಸದಮಳನೆ ಕಥೆಯೊಂದ ಕೇಳ್ ಪೂ
ರ್ವದಲಿ ವರ ವಿದ್ಯಾಧರ ಕ್ಷೇ
ತ್ರದಲಿ ಭೂಮಿಪ ಲೋಕ ಪಾಲಕನಖಿಳ ರಾಜ್ಯವನು ।
ಮುದದಿ ಪಾಲಿಸುತೊಂದು ದಿನ ಗಗ
ನದಲಿ ಮೇಘವನೇಕರೂಪದೊ
ಳುದಿಸೆ ನೋಡುತ್ತಿರಲು ಹರೆದುದಕರಸ ಬೆರಗಾದ॥ ೫೦

ನರವರರ ಸಂಸಾರವೀ ಜಲ
ಧರಗಳಂತಸ್ಥಿರವೆನುತ ಭೂ
ವರನು ವೈರಾಗ್ಯದಲಿ ಪಟ್ಟವನಾತ್ಮಜಗೆ ಕಟ್ಟಿ ।
ಭರದಿ ದೀಕ್ಷೆಯ ಕೊಂಡು ತಪವಾ
ಚರಿಸೆ ಭಸ್ಮಕ ರೋಗ ಮುನಿಗಾ
ವರಿಸೆ ಕಪಟದ ತಪವ ಸುಡು ಸುಡಲೆಂದು ಬಿಸುಸುಯ್ದ॥ ೫೧

ಕ್ರೂರನಿಗೆ ಕುಟಿಲಾತ್ಮನಿಗೆ ಸಂ
ಸಾರ ಲೋಲುಪನಿಗಂತ್ಯಜನಿಗಘ
ಶಾರದಗೆ ದೋಷಾನುರಕ್ತಗೆ ನಿರ್ಮಳಗೆ ಭೂತ ।

ವೈರಿಗಳ್ವ ಮದಾನ್ವಿತಂಗೆ। ವಿ
ಕಾರಿಗದಯಗೆ। ರೋಗಿಗಳಿಗೆ। ವಿ
ಚಾರಿಸಲು। ತಪ ಸಲ್ಲದದು। ತಾ। ವಿಫಲವವನಿಯಲಿ।॥ ೫೨

ಆದರಿನಾ ರುಜಯುತಗೆ। ತವ ಸ
ಲ್ಲದು। ಸುನಿಶ್ಚಯವೆಂದು। ಸುತಪಃ
ಸುದತಿಯನು। ರಾಜ್ಯಾಂಗನೆಯ। ಬಿಟ್ಟಂತೆ। ಬಿಟ್ಟು ರುಜಾ।।
ಕ್ಷುಧೆ ವಿಘಾತಿಸೆ। ಮುನಿಯಖಿಳ। ದೋ
ಷದೆ। ಯಥೇಷ್ಟಾಚಾರದಲಿ। ಬಹು
ಸದನದೊಳು। ಭುಂಜಿಸಲು। ಹರೆಯುದು ರೋಗವಾ। ಮುನಿಯ ॥

ಬಳಿಕ। ಮುನಿ ಗಂಧೋತ್ಕಟನ। ನಿಜ
ನಿಳಯಕ್ಕೈತರಲಾತ್ಮಜರು। ತಾ।
ವೊಲಿದು ತಮ್ಮ ತ್ರೈನೂರ್ವರೂಟಕ್ಕೆಡೆಗಳೊಂದಿಸಿರೆ। ।
ಒಳಗೆ। ಪುಗುತಂದಾ ಮುನೀಶ್ವರ
ನಳಬಳವ। ಕಂಡಾ। ಕುಮಾರಕ
ತಿಲಕ ಮೊದಲಾತಂಗೆ ತಾ ಭೋಜನವನೊಂದಿಸಿದ ॥ ೫೪

ಬಡಿಸಲದರಿಂ ಮುನ್ನಲುಂಡವ
ಗಡಿಸುತಿರೆ। ಕಂಡಾ। ಕುಮಾರಕ
ರೊಡಲನೊಲೆದೊಲೆದುಬ್ಬಿ ಮನೆಗಟ್ಟಶನವನು। ತರಿಸಿ। ।
ಒಡನೆ ತಮ್ಮ ತ್ರೈನೂರ್ವರಗಲನು।
ಬಡಿಸೆ। ತೃಪ್ತಿಯನೈದದಿರೆ। ತಾ
ಹಿಡಿದ। ಕಬಳವನಿತ್ತನಾ ಮುನಿವರನ। ಹಸ್ತದಲಿ। ॥ ೫೫

ತರುಣ ಕೇಳಾ ಪುಣ್ಯ ಪುರುಷನು
ಕರದ ಕಬಳವ ಕೊಡಲು ತನ್ಮುನಿ
ವರನ ಕ್ಷುತ್ತೃಷೆ ಹಿಂಗೆಯಾಕ್ಷಣ ಭಸ್ಮಕ ವ್ಯಾಧಿ ।
ಕರಗೆ ಸಂತಸಬಟ್ಟು ಪ್ರತ್ಯುಪ
ಕರಿಸಬೇಕೆನುತಿರ್ದದಾವುದು
ಪರಿಯೆನುತ್ತಾ ಮುನಿಪ ಪರಿಕಿಸುತಿರ್ದನಾತ್ಮದಲಿ ॥ ೫೬

ವಿದ್ಯವೇ ಧನ ಧಾನ್ಯ ರತ್ನ ಸು
ವಿದ್ಯವೇ ವಿಖ್ಯಾತಿ ಸತ್ಕುಲ
ವಿದ್ಯವೇ ವಿಜ್ಞಾನ ಸತ್ಯಾಚಾರ ಧರ್ಮ ದಯೆ ।
ವಿದ್ಯವೇ ಸಾಮ್ರಾಜ್ಯ ಸಂಪದ
ವಿದ್ಯವೇ ಪಿತೃ ಮಾತೃ ಬಂಧು ಸು
ವಿದ್ಯದಿಂದತ್ಯಧಿಕವಿಲ್ಲದ ತಿಳಿಯಬೇಕೆಂದ ॥ ೫೭

ಅರಸ ತನ್ನಯ ದೇಶದೊಳು ವಿ
ಸ್ತರದೊಳಧಿಕನು ಮೂರ್ಖ ತನ್ಮಂ
ದಿರದೊಳಗ್ಗಳನಾ ಪ್ರಭುವು ತನೂರೊಳತ್ಯಧಿಕ ।
ಪರಿಕಿಸಲು ವಿದ್ವಾಂಸ ವಿಶ್ವದೊ
ಳುರುತರದೊಳತಿ ಪೂಜ್ಯನದರಿಂ
ದೊರೆವೆನೀತಂಗಮಳ ವಿದ್ಯೆಯನೆಂದು ಚಿಂತಿಸಿದ ॥ ೫೮

ಎಂದಖಿಳ ವಿದ್ಯೆಯ ವಣಿಗ್ವರ
ನಂದನಗೆ ಮುನಿ ಕಲಿಸಿದನು ಕೇ
ಳೆಂದು ತನ್ನಯ ತೆರನ ಕಥೆಯ ಬೆಡಂಗಿನಿಂದಾರ್ಯ ।

ನಂದಿ ತಿಳುಹಿದೊಡೀತನೇ ತಾ
ನೆಂದರಿದು ಗುರು ಶುದ್ಧಿವೆತ್ತ
ನಂದದಲಿ ಮುನಿಗೆರಗಿ ಬಳಿಕ ಕುಮಾರನಿಂತೆಂದ ॥ ೫೯

ವರ ಮುನಿಯೆ ಗುರು ಶಿಷ್ಯರುಗಳಾ
ಚರಣೆಯೆಂತು ಸುಶಾಂತಿ ಜಪ ತಪ
ಪರಮ ಧರ್ಮಾಧರ್ಮ ಮೋಕ್ಷ ಜ್ಞಾನ ದಯವೆಂತು ।
ನರಕ ಕರ್ಮ ಶುಭಾಶುಭಂಗಳ
ತೆರನ ಮೋಕ್ಷದಲಾ ಪ್ರಪಂಚವ
ನೊರೆಯಬೇಕೆನಗೆನಲು ಮುನಿಪ ಕುಮಾರಗಿಂತೆಂದ ॥ ೬೦

ಧರ್ಮ ದಯೆ ಪಡೆದಷ್ಟ ಮದ ದು
ಷ್ಕರ್ಮಗಳನಿಟ್ಟೊರಸಿ ಮನದೊಳು
ಹಮ್ಮನುಳಿದಿಂದ್ರಿಯವನೊದೆದೆರಡಿಲ್ಲದಘವಳಿದು ।
ದುರ್ಮತವನಪಹರಿಸಿ ಮಾಯದೊ
ಳೆಮ್ಮ ಪರಿ ಷಡ್ವರ್ಗಮಳಿವ ಸು
ನಿರ್ಮಳಾತ್ಮಕನಾದೊಡವ ಗುರು ಮಗನೆ ಕೇಳೆಂದ ॥ ೬೧

ತನು ಮನವನೊಸೆದಿತ್ತು ವಸ್ತುಗ
ಗಳನಿತರಲಿ ವಂಚಿಸದೆ ಪಸರಿಸಿ
ವಿನಯ ಮಾಡುತ ಗುರುವಿನಡಿವಿಡಿದಿತ್ತ ನೇಮವನು ।
ಅನುಕರಿಸಿ ಭಯ ಭಕ್ತಿಯಲಿ ಕನ
ಸಿನಲಿ ಮಾರುತ್ತರವನೀಯದೆ
ಸನುನಯದೊಳೆಸಗುವನು ಶಿಷ್ಯನು ಮಗನೆ ಕೇಳೆಂದ ॥ ೬೨

ಇಳೆಯೊಳಖಿಳ ಕಳಾವಿದತೆ ತಾ
ನಳವು ಗುಣವಾಭರಣ ಸುಚರಿತೆ
ಚೆಲುವು ಧರ್ಮವೆ ಮೋಕ್ಷ ಸಂಚಲ ಚಿತ್ತವಂಧತ್ವ ।
ಮುಳಿಸು ಹೊಲೆ ಮೃಷೆ ರೌದ್ರವವು ದು
ರ್ಬಲವೆ ಜೀವನ್ಮೃತವು ಪಿಸುಣತೆ
ಕೊಲೆಯುದಲೆ ಸುಕುಮಾರ ಕೇಳೆಂದರುಹಿದನು ಮುನಿಪ ॥ ೬೩

ಧರೆಗೆ ವಿಜಿತೇಂದ್ರಿಯನೆ ಸುಖಿ ಸ
ಚ್ಚರಿತನೇ ದುರ್ಲಭನು ಪರ ಧನ
ಕೆರಗದವನೇ ಶುಚಿಯಹಿಂಸನ ಜಾತನಭಿಮಾನಿ ।
ಗರುವನದಯನೆ ಪಾಪಿ ಕಾಮಾ
ತುರನತುಳ ನಯಯುತನು ಯೋಗೀ
ಶ್ವರನು ತಿಳಿಯೆ ಕೃತಘ್ನ ನಾರಕಿಯೆಂದನಾ ಮುನಿಪ ॥ ೬೪

ಕ್ರೂರನಾಗದೆ ಬಂಧುಜನಕುಪ
ಕಾರಿಯಾಗಿ ಸುವಿದ್ಯೆಗಳಲಿ ವಿ
ಶಾರದನು ತಾನಾಗಿ ಜನನೀ ಜನಕರಾಜ್ಞೆಯನು ।
ಮೀರದೆ ಕುಲಾಚಾರದಲಿ ನಡೆ
ದಾರು ವರ್ಗವನೊಂದಿ ದುರ್ವ್ಯಾ
ಪಾರಿಸದೆ ನಡೆದವನು ತಾ ಸತ್ಪುರುಷನವನಿಯಲಿ ॥ ೬೫

ಮನ ವಚನ ಕಾಯದಲಿ ವರ ಕಾಂ
ಚನ ಲಸದ್ದ್ರವ್ಯಂಗಳಲಿ ವಂ
ಚನೆಯ ಮಾಡದೆ ಕೊಟ್ಟು ಕೊಂಡ ಮಹೋಗ್ರ ಸಂಕಟವ ।

ಅಸಿತುವನು ಪರಿಹರಿಸಿ ಭೇದದ
ನೆನೆಹಧಿಲ್ಲದೆ ಹಿತವ ಸಂತತ
ವನುಕರಿಸುತಿರ್ಪವನು ಮಿತ್ರನು ಮಗನೆ ಕೇಳೆಂದ ॥ ೬೬

ಬೇಡಿದರಿಗೊಲಿದಿತ್ತು ಮದಗಳ
ನೀಡಿರಿದು ರಿಪು ನೃಪರ ತಲೆ ಸೆಂ
ಡಾಡಿ ಮರೆವುಗೆ ಕಾಯ್ದು ಸಪ್ತ ವ್ಯಸನದೊಳು ಮುಳುಗಿ ।
ಕೇಡನಾಗದೆ ಸರ್ವರನು ವಶ
ಮಾಡಿಕೊಂಡು ಸುನೀತಿ ಮಾರ್ಗದಿ
ನಾಡ ಪಾಲಿಸುವಾತನರಸ ಕುಮಾರ ಕೇಳೆಂದ ॥ ೬೭

ಚೋರಗತ್ಯಾಚಾರಿಗಜ್ಞಗೆ
ಜಾರಗತಿ ಕುಟಿಲಂಗೆ ಖಳಗವಿ
ಕಾರಿಗನ್ಯಾಚಾರಯುತಗಹಿತಂಗೆ ನಿರ್ದಯಗೆ ।
ಕ್ರೂರ ಕರ್ಮಿಗೆ ಶಠಗೆ ಪಾರ
ದ್ವಾರಿಗಾತ್ಮಸ್ತುತಗೆ ಕೊಂಡೆಯ
ಗಾರಯಿಲು ತಾನವರಿಗಿಹ ಪರವಿಲ್ಲ ಕೇಳೆಂದ ॥ ೬೮

ಕಾಮುಕಗೆ ದುರ್ವಾದಿಗಾತ್ಮ ವಿ
ರಾಮಕಾರಿಗೆ ವಿಬುಧ ವೈರಿಗೆ
ನಾಮ ಧಾರಿಗೆ ಖಲಗೆ ಮಿಥ್ಯಾ ದೃಷ್ಟಿಗದಯಂಗೆ ।
ಹೇಮ ಚೋರಗೆ ಕುಜನಗತುಳ
ಗ್ರಾಮಿಣಗೆ ಕುಲ ನಾಶಕಂಗೆ ಮ
ಹಾ ಮಹೋದ್ಧತರಿಂಗೆ ತಾನಿಹಪರಗಳಿಲ್ಲೆಂದ ॥ ೬೯

ಮೃಷೆ|ಮುಳಿಸು| ಕುಲ ಧರ್ಮವನು| ಬಿ
ಟ್ಟೆಸಗುವಜ್ಞತೆಯಾ ಪರ ಸ್ತ್ರೀ
ವ್ಯಸನವಾತ್ಮಸ್ತುತ್ಯವತ್ಯಾಚಾರ|ಬಕ ವೃತ್ತಿ| |
ಪಿಸುಣತನ ಪರ ನಿಂದೆ|ಗರ್ವತೆ|
ನುಸುಳು|ಹಿಂಸೆ|ವಿಷಾದ|ಮದ|ಕ
ರ್ಕಶ|ವಚನವಿವು|ಮಗನೆ|ದೋಷಾಕರಗಳವನಿಯಲಿ| ‖ ೭೦

ಎಂದು|ಧರ್ಮಾಧರ್ಮವರುಹಿ|ಮು
ನೀಂದ್ರನೇಕಾಂತದಲಿ|ನೀ|ಸ
ತ್ಯಂಧರನ|ಸುಕುಮಾರ|ಗಂಧೋತ್ಕಟನ|ಮಗನಲ್ಲ| |
ಹಿಂದೆ|ಕಾಷ್ಠಾಂಗಾರ|ನಿಮ್ಮಯ|
ತಂದೆಯನು|ಕೊಂದಿಳೆಯ|ಪಟ್ಟವ
ನೊಂದಿದನು|ಕೇಳೆಂದು|ಕುವರಂಗರುಹಿದನು|ಮುನಿಪ| ‖ ೭೧

ಮುನಿಪನಿಂತರುಹಲ್ಕೆ|ಹರುಷದ|
ವನಧಿಯೊಳಗೋಲಾಡಿ|ತಜ್ಜನ
ಕನನು|ಕಾಷ್ಠಾಂಗಾರ|ಕೊಂದನೆನಲ್ಕೆ ಘುಡು ಘುಡಿಸಿ| |
ಕನಲಿ|ಗರ್ಜಿಸಿ|ಕಣ್ಣಿನಲಿ|ಕೆಂ
ಷನುಕರಿಸೆ|ಪುರವುರುಹಿದೀಶ್ವರ
ನೆನಲು|ಕಿಡಿ ಕಿಡಿವೋಗಿ|ಮುಳಿದು|ಕುಮಾರನಿಂತೆಂದ| ‖ ೭೨

ಇಂದು|ಕಾಷ್ಠಾಂಗಾರನೆಂಬನ|
ಕೊಂದು|ಭೂ|ಕಾಮಿನಿಗೆ|ಪತಿಯಹೆ
ನೆಂದಖಿಳ|ಶಸ್ತ್ರಾಸ್ತ್ರ ಪರಿವೃತನಾಗಿ|ಮುನಿಗೆರಗಿ| |

ನಿಂದಿರಲು ಕುವರನ ಸುಧೈರ್ಯಕೆ
ನಂದಿ ಮೆಚ್ಚಿಯೆ ಸೆರಗ ಹಿಡಿದಾ
ನಂದದಲಿ ಮೆಯ್ದಡವಿ ಬಳಿಕಿಂತೆಂದನಾ ಮುನಿಪ ॥ ೭೩

ತರಳ ನೀನಸಹಾಯಕನು ಹೊ
ಕ್ಕರಿಯೆ ಮುನ್ನಾಹವವನಿಂತೀ
ಪರಿಯೊಳುದ್ರೇಕಿಸುವುದನುಚಿತ ದೇಶ ಕಾಲಗಳ
ಸ್ಥಿರದೊಳಾರಯ್ದರಸನಭ್ಯಂ
ತರವನೀಕ್ಷಿಸಿ ತನ್ನಳವನರಿ
ದುರವಣಿಸಬೇಕೆಲೆ ಕುಮಾರಕ ಎಂದನಾ ಮುನಿಪ ॥ ೭೪

ಕೋಪವೇ ಚಾಂಡಾಲವಶುಭತೆ
ಕೋಪವೇ ದುಷ್ಕರ್ಮವಿಜ್ಞತೆ
ಕೋಪವೇ ಜಪ ತಪ ದಯಾನುಷ್ಠಾನ ದಾನ ಹತ
ಕೋಪವೇ ತ್ರೈವರ್ಗ ಭಂಜನ
ಕೋಪವೇ ಪ್ರಾಣಾಪಹಾರಣ
ಕೋಪದಿಂದತ್ಯಧಿಕ ದುರ್ಗತಿಯಿಲ್ಲವವನಿಯಲಿ ॥ ೭೫

ಅರಿಯನೊಂದಿಹನರಿಯದುದ ತಾ
ನರಿವೆನೆಂಬವನೊಲ್ಲದಂಗನೆ
ಗೆರಗುವವ ಧರ್ಮಜ್ಞರನು ಹಗೆಗೊಂಬನಿಹಪರವ
ಮರೆವ ಕೇಳದೆ ಹೇಳ್ವನನ್ಯರ
ಹೊರೆವ ಮೇಲ ವಿಚಾರಿಸದೆ ಸಂ
ಗರವ ಹೊಗುವವನವನು ಮೂಢನು ಮಗನೆ ಕೇಳೆಂದ ॥ ೭೬

ಅದರಿನಿಳನಧನಳಬಳವನರಿ
ಯದೆ ರಣಕ್ಕತಿ ಮುಳಿದು ನೀ ಹೋ
ಹುದು ಮತವದಲೊಂದು ವತ್ಸರ ಸ್ವೈರಿಸಿದೊಡೆಮಗೆ ॥
ವಿದಿತ ಗುರು ದಕ್ಷಿಣೆಯದೆಂದತಿ
ಮುದದಿ ಜೀವಂಧರನ ನಾನಾ
ವಿಧದಿ ತಿಳುಹಿದನಾಯಗ ನಂದಿ ಮುನೀಂದ್ರನೊಲವಿನಲಿ ॥ ೭೭

ಇಳೆಯ ಪತಿ ಕೇಳಿಂತು ಶಿಷ್ಯನ
ಕಲುಷವನು ಕಳೆದಖಿಳ ವಿಧದಲಿ
ತಿಳುಹಿ ಬಳಿಕಾ ಕುವರನನು ಬೀಳ್ಕೊಂಡು ದೀಕ್ಷೆಯನು
ತಳೆದು ತಪದ ಮಹತ್ತ್ವದಿಂದು
ಜ್ವಲಿಸಿ ಕರ್ಮಕ್ಷಯವ ಮಾಡಿಯೆ
ನಿಲಿಸಿದನು ಮುಕ್ತಿಯನು ತನ್ಮನಿಯರಸ ಕೇಳೆಂದ ॥ ೭೮

ಇದು ವಿನಮದಮರೇಂದ್ರ ಶ್ರೀ ಜಿನ
ಪದ ಕಮಲ ಷಟ್ಚರಣ ವಾಣೀ
ವದನ ದರ್ಪಣ ಭೂಸುರೋತ್ತಮ ಬಸವಣಾಂಕ ಸುತ
ಚದುರ ಭಾಸ್ಕರ ರಚಿತ ಧರ್ಮ
ಪ್ರದನ ಜೀವಂಧರನ ಚರಿತೆಯೊ
ಳಿದು ಕುಮಾರೋದಯ ವಿವರ್ಣನೆಯರಸ ಕೇಳೆಂದ ॥ ೭೯

---

# ಆರನೆಯ ಸಂಧಿ

ಸೂಚನೆ ॥ ದುರುಳಕಾಷ್ಠಾಂಗಾರ ತುರುಗಳ
ಮರಳಿಸದೆ ಮುರಿಯಲ್ಕೆ ಜೀವಂ
ಧರನು ಶಬರರನೊರಸಿ ತಿರುಹಿದನಖಿಲ ಗೋಕುಲವ ॥

ಅರಸ ಕೇಳ್ ತಾಯುಳಿದ ಶಿಶುವಿನ
ಪರಿಯಲಾ ಜೀವಂಧರನು ತ
ದ್ಗುರು ವಿಯೋಗದಿ ಬಹುಳ ಚಿಂತಾಂಬೋಧಿಯೊಳು ಮುಳುಗಿ ॥
ನಿರುಪಮಾತ್ಮನ ನೆನೆವ ಯೋಗೀ
ಶ್ವರನವೊಲು ತಾನಾರ್ಯನಂದಿಯ
ನಿರದೆ ಹೃತ್ಕಮಲದಲಿ ನೆನೆಯುತ್ತಿರ್ದನನವರತ ॥ ೮೦

ಪರಮ ಪುರುಷರು ರೂಪುದೋರಿಸಿ
ಸರಿವರಲ್ಲದೆಯೊಂದು ತಾವಿನೊ
ಳಿರರು ತಾವದರಿಂದ ಚಿಂತೆಯನುಳಿಯಬೇಕೆನುತ
ಪರಿಣತಿಯೊಳಾ ಶೋಕವನು ಪರಿ
ಹರಿಸಿಕೊಂಡುತ್ಸವದಿ ಜೀವಂ
ಧರನು ತನ್ನೈನೂರ್ವರೊಳೊಂದಾಗಿರ್ದನೊಲವಿನಲಿ ೮೧

ಸ್ಮರನನಾಕಾರದಲಿ ವಾಣೀ
ಶ್ವರನ ವಿದ್ಯದಿ ಸುರಪತಿಯನೈ
ಶ್ವರಿಯದಲಿ ಗೀಷ್ಪತಿಯ ನಯ ನೀತಿಯಲಿ ಧನ ಪತಿಯ
ಸಿರಿಯೊಳಾ ಚಕ್ರಿಯನುಪಾಯೋ
ತ್ಕರದೊಳೂರ್ಜಿತ ತೇಜದಲಿ ಭಾ
ಸ್ಕರನಪೋಲ್ತೆಸೆದಿರ್ದನಾ ಸುಕುಮಾರನೊಲವಿನಲಿ ॥ ೮೨

ವಿನುತ ಕುಮುದಾಂಬಕ ಗಭೀರ
ಧ್ವನಿ ಲಸದ್ಬಿಂಬೋಷ್ಠ ಚಂದ್ರಾ
ನನ ವಿಶಾಲಿತ ವಕ್ಷ ಸೂಕ್ಷ್ಮ ಶ್ಮಶ್ರು ತನು ಮಧ್ಯ ।
ವನರುಹಾಂಘ್ರಿ ಸುದೀರ್ಘ ಭುಜ ರ
ಕ್ತ ನಖ ತುಂಗ ಘ್ರಾಣ ಮೃದು ತನು
ಘನತರೋತ್ಕಟ ಪೂರ್ಣ ಭಾಳದೊಳೆಸೆದನೊಲವಿನಲಿ ॥ ೮೩

ಕೇಳು ಮಗಧ ನೃಪಾಲ ಮೂರ್ಖರ
ಮೌಳಿ ಕಾಷ್ಠಾಂಗಾರನಿತ್ತಲು
ಲೀಳೆಯಿಂದೊಡ್ಡೋಲಗಂಗೊಟ್ಟಿರಲು ನಿರ್ದ್ರವದ ।
ತಾಳಿಯಲಿ ಕೈ ಮೊರೆಯು ಕಂಬಳಿ
ಕೋಲ ಕಲ್ಲಿಯ ಜೋಳಿಗಳ ಗೋ
ಪಾಳಕರು ಬಂದೆರಗಿ ಬಿನ್ನೈಸಿದರು ಭೀತಿಯಲಿ ॥ ೮೪

ಧರಣಿಪತಿ ಚಿತ್ತೈಸು ಶತ ಸಾ
ಸಿರದ ಸಂಖ್ಯೆಯ ತುರು ಸಮೂಹದ
ಭರದೊಳೆಂತು ಕಿರಾತರುಗಳೈತಂದು ಹಟ್ಟಿಗಳ ।
ಇರಿದು ಕೊಂಡುಯ್ದುಳುದೆಲ್ಲವ
ಸೆರೆಯ ಹಿಡಿದರು ದೇವ ನೀನದ
ಪರಿಹರಿಸಿಕೊಡು ಸಲಹು ಸಲಹೆಂದೆರಗಿತಖಿಳ ಜನ ॥ ೮೫

ಕೇಳಿ ಸಿಡಿಮಿಡಿಗೆಯ್ಯುತೆದ್ದು ನೃ
ಪಾಲನೋಲಗವನು ವಿಸರ್ಜಿಸಿ
ಕಾಲಭೈರವನಂತೆ ಗರ್ಜಿಸಿ ಶಬರ ಸಂಕುಲವ ।

ಸೀಳಿ ಹೆಡದಲೆಯಿಂದಲುಗಿವೆನು
ನಾಲಗೆಯನೆಂದಾಹವಕೆ ಭೂ
ಪಾಲನನುವಾಗಲ್ಕೆ ಮಗಧ ನೃಪಾಲನಿಂತೆಂದ ॥ ೮೬

ನೊರಜ ಕೊಲುವೊಡೆ ಕೈದುವೇತಕೆ
ಧರಣಿಪತಿ ಹುಲು ಬೇಡರನು ಸಂ
ಹರಿಸಿ ಬಹುದಕೆ ನೀವು ಪರಿಯಂತೇಕೆ ಸೇನೆಯನು ।
ನೆರಹು ತಾನೊಡನೆಯ್ದಿ ಶಬರರ
ನೊರಸಿ ನಿಮಿಷಕೆ ತುರು ಸಮೂಹವ
ಮರಳಿಸುವೆನೆಂದಾ ಮದನ ಬಿನ್ನೈಸಿದನು ನೃಪಗೆ ॥ ೮೭

ಎನಲು ಮತವಹುದೆನುತ ಸೇನೆಯ
ನನುನಯದಿ ನೆರೆ ಕೂಡಿಕೊಟ್ಟಾ
ಜನಪನಟ್ಟಲು ಬಂದು ಮದನ ಪುಳಿಂದರನು ಮುತ್ತಿ ।
ಕನಲಿ ಕಾದುತ್ತಿರೆ ಕಿರಾತರು
ದನು ಸರಂಗಳ ಕೊಂಡು ಘಡ ಹೋ
ಗೆನುತ ರೋಷದಿ ತಾಗಿದರು ಭೂಪಾಲ ಕೇಳೆಂದ ॥ ೮೮

ಭರದೊಳಾ ರಿಪು ಸೇನೆಯನು ನಿ
ಷ್ಠುರದಿ ಶಬರರು ಬೆರಸಿ ಬೊಬ್ಬಿರಿ
ದರರೆ ಹಿಮ್ಮೆಟ್ಟೆನುತ ಬಾಣದ ಮಳೆಯ ಕರೆಯುತಿರೆ ।
ತರಹರಿಸಲಳವಡದೆ ಮುಗಿದಾ
ಪುರಕೆ ಮದನ ಮಗುಳ್ದು ಬರೆ ಕಾ
ತರಿಸಿ ಕಾಷ್ಠಾಂಗಾರ ತಾ ಹೊರವಟ್ಟನಾಹವಕೆ ॥ ೮೯

ತಳಿತ ಪಲ್ಲವ ಸತ್ತಿಗೆಯು ಹೊಂ
ಬಳಯಿಗೆಯು ಸೀಗುರಿಯ ಚಮರಾ
ವಳಿಯು ಲಗ್ಗೆಯೊಳಲ್ಲಿರಿವ ಘನ ವಾದ್ಯ ರಭಸಗಳ ।
ಒಲವಿನಿಂದಾ ನೃಪತಿ ಚಾತು
ರ್ಬಲ ಸಹಿತ ಬಂದಾ ಕಿರಾತರ
ನಳಪಿಯಲಿ ತಾಗಿದನು ಭೂಮಿಾ ಪಾಲ ಕೇಳೆಂದ ॥ ೯೦

ಶರಧಿ ಶರಧಿಯು ತಾಗುವಂದದೊ
ಳೆರಡು ಬಲ ತಲೆಯೆತ್ತಿ ಕಾದು
ತ್ತಿರಲು ಮೆಲ್ಲನೆ ರಾಯ ದಳವೊಳಸರಿಯುತಿರೆ ಕಂಡು ।
ಕೆರಳಿ ಕಾಷ್ಠಾಂಗಾರ ತಾ ಮೇ
ಲುರವಣಿಸಿ ಕೈಮಾಡಲಾ ವನ
ಚರರು ಮುರಿದೋಡಿದರು ಭೂಮಿಾಪಾಲ ಕೇಳೆಂದ ॥ ೯೧

ಭೀಳ ದಾವಾಗ್ನಿಯು ಮಹಾ ಧೂ
ಮಾಳಿಯೋ ಘೋರಾಂಧಕಾರವೊ
ಕಾಳ ರಾತ್ರಿಯೊ ಕಾರ್ಮುಗಿಲೊ ಕಾಳಾಹಿ ಸಂಕುಲವೋ ।
ನೀಳ ಗಿರಿಗಳೊ ಮಧುಪ ಕುಲವೊ ತ
ಮಾಳ ವನವೆನೆ ಮತ್ತೆ ಖಳರು ಛ
ಡಾಳಿಸುತ ಮೇಲೇರಿದರು ಘನತರದ ಕೋಪದಲಿ ॥ ೯೨

ಪೊಡವಿ ಪತಿ ಕೇಳಿಂತು ಲುಬ್ಧಕ
ರೊಡನೆ ತಾಂ ಸಂಗಡಿಸಿಕೊಂಡವ
ಗಡಿಸಿ ಬಂದೊಗ್ಗಿನಲಿ ಶರಗಳ ಮಳೆಯು ಕರೆಯುತಿರೆ ।

ನಡುಗಿ ಕಾಷ್ಠಾಂಗಾರ ಹಿಂದಕೆ
ಮಡ ಮುರಿಯಲಾ ಸರ್ವ ದಳವೊ
ಗ್ಗೊಡೆದು ನೆರೆ ಮುರಿದೋಡಿಹೋದುದು ಬಸಿವ ರಕ್ತದಲಿ ॥

ದುರುಳ ಕಾಷ್ಠಾಂಗಾರನಿಂತೀ
ಪರಿಭವದೊಳಾ ಪುರವ ಹುಗೆ ಘನ
ಗಿರಿಯ ನೊರಜಾನುವುದೆ ಸತ್ಯಂಧರನು ತಾಳ್ದಿಳೆಯ ।
ಧರಿಸಲಾಪನೆ ಪಾಪಿಯಿವನೆಂ
ದಿರದೆ ತಮ ತಮಗೆಲ್ಲ ಬಯ್ಯುತ
ನೆರೆದ ಜನ ಬೆಂಬೀಳುತಿರ್ದುದು ಭೂಪ ಕೇಳೆಂದ ॥ ೯೪

ಆರಸ ಕೇಳಾ ಗೋಕುಲಾಧೀ
ಶ್ವರನೆನಿಪಪರ ನಂದಗೋಪನು
ತುರುವ ಮರಳಿಸಿದವಗೆ ಹೇಮದ ಪುತ್ತಳಿಗಳೇಳ ।
ಬೆರಸಿಯೆನ್ನಾತ್ಮಜೆಯನೀವೆನು
ಪುರದೊಳತಿ ಬಲರೈದಿ ತುರುಗಳ
ಮರಳಿಸುವುದೆಂದೊಲಿದು ಸಾರಿಸಿದನು ಪುರಾಂತದಲಿ ॥ ೯೫

ಪುರದೊಳಾ ವೈಶ್ಯೇಂದ್ರ ತನ್ನಯ
ವರತನುಜೆ ಗೋವಿಂದೆಯನು ವಿ
ಸ್ತರದೊಳೀವೆನೆನುತ್ತಲಂದಾ ಪುರದೆ ಸಾರಿಸಲು ।
ಅರಸು ಕಾಷ್ಠಾಂಗಾರ ಸಹಿತವೆ
ಮುರಿದು ಬಂದನು ನಮ್ಮ ಬಾಹಾ
ಸ್ಫುರಣದಳವೆನಿತೆಂದು ಮನಗುಂದಿತು ಪುರಸ್ತೋಮ ॥ ೯೬

ಕರಿ ತುರಗ ರತ್ನಾಭರಣವೈ
ಶ್ವರಿಯ ಸತಿ ಸುತ ಮಿತ್ರರುಗಳಂ
ತರಿಸೆ ಮಗುಳಿವ ಗಳಿಸಬಹುದು ಶರೀರ ತೊಲಗಿದರೆ ।
ಮರಳಿ ರೂಢಿಸಬಾರದದರಿಂ
ತರುಣಿಗೋಸುಗ ಸತ್ತು ಪೇಲಹ
ಸಿರಿಯ ನಂಬುವರಾರೆನುತ ಮನಗುಂದಿತಖಿಲ ಜನ ॥ ೯೭

ಇಂತು ಪೆಂಪಳಿದೊರ್ವರಾ ನಗ
ರಾಂತದಲಿ ಪೊರಪೊಣ್ಮದಿರಲು ಜ
ಯಂತ ನಿಭ ಜೀವಂಧರನು ತಾ ಕೇಳಿ ಗೋವುಗಳ ।
ಸಂತತಿಯ ನೆರೆ ತಿರುಹಿತಂದಾ
ಕಾಂತೆಯನು ಪದ್ಮಾಸ್ಯಗರಸಿಯ
ಹಂತೆ ಮಾಡುವೆನೆಂದು ತನ್ನೊಳು ನೆನೆದನೊಲವಿನಲಿ ॥ ೯೮

ಗುರು ಯತೀಂದ್ರರ ಬಾಧೆಯನು ವಿಬು
ಧರ ಮಹೋಪದ್ರವನು ಗೋ ಬ್ರಾ
ಹ್ಮರಿಗೆ ಬಂದಾಪದವನಬಲಾ ಜನದ ಸಂಕಟವ ।
ಪುರುಷನಾದವ ಕಂಡದನು ಪರಿ
ಹರಿಸದಿಹುದದು ಹೀನವೀ ಕ್ಷಣ
ತುರುವ ಮರಳಿಸಬೇಕೆನುತ ಚಿಂತಿಸಿದನಾತ್ಮದಲಿ ॥ ೯೯

ಎಂದು ನೆನೆದು ಕುಮಾರ ಬಳಿಕಾ
ನಂದಗೋಪನ ಕರೆಸಿ ಹೆದರದಿ
ರೆಂದು ಮರಳಿಚಿ ತರ್ಪೆ ತುರುಗಳನೆಂದಭಯವಿತ್ತು ।

ನಿಂದು ಕೈದುವ ಕೊಂಡು ರಥವ ಸು
ರೇಂದ್ರ ಸನ್ನಿಭನೇರಿ ಬಂದನು
ಹಿಂದೆ ಸುಕುಮಾರಕರು ತಾವೈನೂರ್ವರೊಗ್ಗಿನಲಿ ॥ ೧೦೦

ಲಗ್ಗೆವರೆಗಳಲಾ ಕುಮಾರಕ
ರೊಗ್ಗು ಕವಿದು ಕಿರಾತ ಚಯವನು
ನುಗ್ಗು ನುಸಿಯಾಗರೆದು ಕಾಷ್ಠಾಂಗಾರಕನ ಗೆಲಿದು ।
ಮೊಗ್ಗು ನವ್ಮೊಳು ಬೇಡ ಬೇಡೆಂ
ದುಗ್ಗಡದಿ ಕೂರಂಬುಗಳ ಸುರಿ
ದಗ್ಗಳೆಯರಿಟ್ಟಣಿಸಿ ಕಾದಿದರರಸ ಕೇಳೆಂದ ॥ ೧೦೧

ಸರಲ ವೃಷ್ಟಿಯನಾ ಕಿರಾತರು
ಸುರಿಯೆ ತದ್ಬಾಣಗಳನೆಡೆಯಲಿ
ಮುರಿದು ಜೀವಂಧರನು ನಿಶಿತಾಸ್ತ್ರಗಳಲಾ ಖಳ ।
ಶಿರಗಳನು ಕತ್ತರಿಸಿ ಹೊಕ್ಕೊಡ
ವೆರಸಿ ಗೋ ಸಂಕುಲವ ನಿಮಿಷಾಂ
ತರಕೆ ತಿರುಹಿದನೊಂದುಳಿಯದಂತಾಜಿ ರಂಗದಲಿ ॥ ೧೦೨

ಧರಣಿ ಪತಿ ಕೇಳಿಂತು ಜೀವಂ
ಧರನು ತುರುಗಳ ಮರಳಿಸಲು ಗೋ
ವರರು ಮುದದಲಿ ಗೋವುಗಳನವರವರ ನಾಮದಲಿ ।
ಕರೆದು ಹಟ್ಟಿಯ ಹುಗಿಸೆ ಜೀವಂ
ಧರನು ತನ್ನಯ ಮಿತ್ರರೈನೂ
ರ್ವರು ಸಹಿತ ಗೋಕುಲವ ನೋಡುತ್ತಿರ್ದನೊಲವಿನಲಿ ॥ ೧೦೩

ಕಾಲೊಳವನಿಯನಣೆದು ಕೋಡಲಿ
ಶೈಲಗಳನೊಡೆ ಮಗುಚಿ ದೆಸೆಗಳ
ಮೂಲೆ ಬಿಡೆ ಗರ್ಜಿಸುತ ಮಾರ್ದನಿಗಗಿದು ನಂದಿನಿಯ ।
ಮೇಲಡರಿ ಬಾಲವನು ನೆಗಹಿ ಧ
ಡಾಳಿಸುತಲವ್ವಳಿಸಿ ಮಲೆಯುತ
ಲೀಲೆಯಲಿ ಬಹ ಗೂಳಿಯನು ಸುಕುಮಾರನೀಕ್ಷಿಸಿದ ॥ ೧೦೪

ನಂದಗೋಪನು ಬಳಿಕಲಾ ಜೀ
ವಂಧರನ ಪುರಿಗುಯ್ದು ತನ್ನಯ
ಮಂದಿರದೊಳಂದೇಳು ಹೇಮದ ಪುತ್ಥಳಿಕೆಗಳನು ।
ತಂದು ನಿಲಿಸಿ ಮದೀಯ ಸುತೆ ಗೋ
ವಿಂದೆಯನು ನೀ ಮದುವೆಯಾಗೆನ
ಲಂದು ವೈಶ್ಯಾಗ್ರಣಿಗೆ ನಗುತ ಕುಮಾರನಿಂತೆಂದ ॥ ೧೦೫

ಎಲೆ ವಣಿಗ್ವರ ಕಾಮಿನಿಯನೀ
ಯೊಲಿದು ಮತ್ಸಹಜಾತಗಾ ಸ
ಲ್ಲಲಿತ ಗುಣ ಪದ್ಮಾಸ್ಯಂಗೆಂದವನನು ನಯೋಕ್ತಿಯಲಿ ।
ತಿಳುಹಿ ಸುಮುಹೂರ್ತದಲಿ ತತ್ಕೋ
ಮಲೆಯ ನಲವಿಂದಗ್ನಿಸಾಕ್ಷಿಕ
ದಲಿ ವಿವಾಹವ ಮಾಡಿದನು ಸುಕುಮಾರನೊಲವಿನಲಿ ॥ ೧೦೬

ಇದು ವಿನಮದಮರೇಂದ್ರ ಶ್ರೀ ಜಿನ
ಪದ ಕಮಲ ಷಟ್ಚರಣ ವಾಣೀ
ವದನ ದರ್ಪಣ ಭೂಸುರೋತ್ತಮ ಬಸವಣಾಂಕ ಸುತ ।

ಚದುರ ಭಾಸ್ಕರ ರಚಿತ ಧರ್ಮ
ಪ್ರದನ ಜೀವಂಧರನ ಚರಿತೆಯೊ
ಳಿದುವೆ ಗೋಗ್ರಹಣ ಪ್ರಶಸ್ತಿ ಮಹೀಶ ಕೇಳೆಂದ ‖ ೧೦೭

---

# ಏಳನೆಯ ಸಂಧಿ

**ಸೂಚನೆ ॥** ವರ ತನುಜೆಯ ಸೊಯಂಬರಕೆ ಸಕ
ಲರಸುಗಳು ಬಹುದೆಂದು ವಾಣಿಜ
ವರನು ಸಾರಿಸಿ ರಚಿಸಿ ನೆರಹಿದನಖಿಳ ನೃಪ ವರರ॥

ಅರಸ ಕೇಳಾ ಪುರದಿ ವಾಣಿಜ
ವರನೆನಿಪ ಶ್ರೀದತ್ತ ವಿಭವದಿ
ಹರನ ಸಖಗೆಣೆಯೆನಿಪ ತಜ್ಞಾತಿಪ್ರವರ್ತನೆಯ।
ಮೆರೆದು ತಾ ಒಳಿಕೊಂದು ದಿನ ವಿ
ಸ್ತರದೊಳಾಯ ವಿಹೀನದ ಪ್ರಯ
ನರರಿಗನುಚಿತವೆಂದು ತನ್ನಯ ಮನದಿ ಚಿಂತಿಸಿದ॥ ೧೦೮

ಅವನಿಯಲಿ ತಾ ಗಳಿಸಿದುದನುಂ
ಬವ ಮಹೋತ್ತಮ ಪಿತೃ ಧನದಿ ಬಾ
ಳುವನು ಮಧ್ಯಮ ತಾಯೊಡವೆಯುಂಡಿಹನು ತಾನಧಮ।
ಯುವತಿಯರ್ಥದೊಳೊಂದಿ ಬದುಕುವ
ನವನಿಯೊಳಗತ್ಯಧಮನದರಿಂ
ದವೆ ಧನವ ಗಳಿಸದವಗಿಹ ಪರವೊಂದುಮಿಲ್ಲೆಂದ॥ ೧೦೯

ತನಯರುಗಳತಿ ದಟ್ಟಿಸುವರಂ
ಗನೆಯರುಲ್ಲಂಘಿಸುವರಿಷ್ಟರು
ಮುನಿವರೊಡಹುಟ್ಟಿದರು ತಸ್ಕರನೆಂಬರೀ ಲೋಕ।

ಜನ ಹಗೆಯು ಕಂಡಂತೆ ತೊಲಗುವ
ರನುಪಮಾಸ್ಥಾನದೊಳಶೋಭಿತ
ನೆನಲು ತಿಳಿಯೆ ದರಿದ್ರನಿಂದತಿ ಕಷ್ಟರಿಲ್ಲೆಂದ॥ ೧೧೦

ಪುರುಷ ಸಕಲೈಶ್ವರ್ಯ ಸಂಪದ
ದೊರೆಕೊಳಲು ಸರ್ವಜ್ಞನವ ಸು
ಸ್ಥಿರ ಸುಭಗ ಕುಲಶೀಲ ಸತ್ಯಾಚಾರ ಗುಣಯುತನು ।
ಸಿರಿ ತೊಲಗಲಪ್ರೌಢನವನ
ಸ್ಥಿರನಶುಚಿ ಕಡು ಮೂರ್ಖ ಜನಬಾ
ಹಿರನವನು ದಾರಿದ್ರ್ಯದಿಂದತಿ ಕಷ್ಟವಿಲ್ಲೆಂದ॥ ೧೧೧

ಎಂದು ಧನವನುಪಾರ್ಜಿಸಲುಬೇ
ಕೆಂದಪೂರ್ವದ ವಸ್ತುವನು ವೈ
ಶ್ಯೇಂದ್ರ ಹಡಗಲಿ ತುಂಬಿಕೊಂಡಬ್ಧಿಯೊಳಗೈತಂದು ।
ಒಂದು ವಿಮಳದ್ವೀಪದಲಿ ತಾ
ತಂದ ವಸ್ತುವ ಮಾರಿ ಲಾಭದೊ
ಳೊಂದಿ ಮಗುಳೆ ಪುರಕ್ಕೆ ಬರುತಿರ್ದನು ಸರಾಗದಲಿ॥ ೧೧೨

ಜಡಧಿ ಮಧ್ಯದಿ ಬರುತಿರಲು ಹಡ
ಗೊಡೆದ ತೆರದಿಂ ನೀರೊಳಗೆ ಬಂ
ದಿಡಿಯುತಿರೆ ಕಂಡಾ ಜನವು ಕಂಗೆಡೆ ವಣಿಗ್ವರನು ।
ನಡುಗುವರೆ ನೀವಕಟ ಹಡಗೋ
ಗ್ಗಡಿಸದದರಿಂ ಮುನ್ನ ನೀವೆಂ
ದೊಡಬಡಿಸಿ ನಯದಿಂದ ತಿಳುಹುತ್ತಿರ್ದನೊಲವಿನಲಿ॥ ೧೧೩

ವರ ವಣಿಗ್ವರನಿಂತು ಬೋಧಿಸು
ತಿರಲು ಹಡಗೊಡೆದಬ್ಧಿಮಧ್ಯದೊ
ಳಿರದೆ ಮುಳುಗಲು ಮುರಿದ ಕೂಪಸ್ತಂಬವನು ಸಾರಿ।
ಭರದೊಳಾ ಶ್ರೀದತ್ತ ದ್ವೀಪಾಂ
ತರವನೈದಿರಲಾ ಪ್ರದೇಶದಿ
ನರನದೊರ್ವನು ಬಂದಿರಲು ಕಂಗೆಟ್ಟು ತಾ ನುಡಿದ॥ ೧೧೪

ಅರಸ ಕೇಳ್ ಶ್ರೀದತ್ತ ತನ್ನಯ
ತೆರನನಾತಂಗರುಹಿ ಶೋಕಿಸು
ತಿರಲವನು ಮಾತಾಡಿಸುತಲಾ ಬಳಿಕ ವಿಜಯಾರ್ಧ।
ಗಿರಿಗೆ ಕೊಂಡುಯ್ದೊಂದು ಠಾವಿನೊ
ಳುರುತರದಿ ಕುಳ್ಳಿರಿಸಿ ಸುಪ್ರಿಯ
ತರದೊಳಾತಗೆ ಕಥೆಯ ಪೇಳುತ್ತಿರ್ದನೊಲವಿನಲಿ॥ ೧೧೫

ಪ್ರಣುತ ವಿಜಯಾಚಳದಿ ವರ ದ
ಕ್ಷಿಣದೊಳುರು ಗಾಂಧಾರ ವಿಷಯಾಂ
ಗಣದಿ ನಿತ್ಯಾಲೋಕ ಪುರವುಂಟಲ್ಲಿ ಭೂಪಾಲ।
ಮಣಿ ಗರುಡವೇಗಾಖ್ಯ ನೃಪ ಧಾ
ರಿಣಿಯೆನಿಪ ಸತಿಸಹಿತಲಿಹನಾ
ರೆಣೆ ಧರಿತ್ರಿಯೊಳಾ ನೃಪಗೆ ವೈಶ್ಯೇಂದ್ರ ಕೇಳೆಂದ॥ ೧೧೬

ಉರ್ವರೆಯೊಳನುನಯದೊಳಿರಲವ
ರಿರ್ವರಿಗೆ ಜನಿಸಿದ ಲಸದ್ಗಂ
ಧರ್ವದತ್ತೆಯೆನಿಪ್ಪ ಸುತೆಗೆ ವಿಲೋಲ ಯೌವನವ।

ಪಾರ್ವರೀಕ್ಷಿಸಿ ಕೋಪುಲೆಯ ನೀ
ನೊರ್ವಗೀಯದೊಡಕ್ಕು ಪಳಿವೆನ
ಲುರ್ವಿಪತಿ ತನ್ನರಸಿ ಧಾರಿಣಿಗೆಂದನೊಲವಿನಲಿ॥ ೧೧೭

ವರ ಕುಮಾರಿಗೆ ರಾಜ ಪುರಿಯೊಳು
ಮೆರೆವ ವೀಣೆಯೊಳೊಲಿಸಿದಾತನು
ಪುರುಷನೆನೆ ಮೌಹೂರ್ತಿಕರು ಬೆಸಸಿರಲು ತಾನಾವ ।
ಪರಿಯೊಳದು ಘಟಿಸುವುದು ನಾವಾ
ಪುರಿಗೆ ಹೋಹುದದಲ್ಲವೆಂದೆದೆ
ಜರಿದು ನೃಪ ಬಳಿಕೊಂದುಪಾಯವ ಕಂಡು ಸತಿಗೆಂಡ ॥ ೧೧೮

ರಾಜ ಪುರಿಯೊಳು ರಾಜರಾಜ ಸ
ಭಾಜನಾ ಶ್ರೀದತ್ತ ನೆರೆ ವಿ
ಭ್ರಾಜಿಸುತ್ತಿಹನಾತನೆಮ್ಮ ಸುಮಿತ್ರನಾತನನು ।
ತೇಜ ಮನ್ನಣೆಯಿಂ ಪಣಿಗ್ವರ
ರಾಜನನು ನಾಂ ಕರೆಸಿ ಮುದದಿ ತ
ನೂಜೆಯನು ಕೈಗೊಟ್ಟೊಡಭಿಮತ ಸಿದ್ಧಿಯಹುದೆಂದ ॥ ೧೧೯

ಅರಸಿ ಸಹಿತಾ ಸ್ಥಿತಿಯ ನೃಪ ನಿ
ರ್ಧರಿಸಿ ಬಳಿಕೊಲವಿಂದಲೆನ್ನನು
ಕರೆಸಿ ನಮ್ಮ ಸ್ನೇಹಿತನನೊಡಗೊಂಡು ಬಾಯೆನಲು ।
ಅರಸಿನಾಜ್ಞೆಯೊಳಬ್ಧಿಯೊಳು ನೀ
ಬರಲು ಹಡಗೊಡೆದಂತೆ ವಿಧ್ಯೋ
ತ್ಕರದಿ ಮಾಡಿದೆ ನಿನ್ನನಿಲ್ಲಿಗೆ ತಂದೆ ನಾನೆಂದ ॥ ೧೨೦

ಹಡಗೊಡೆದುದಿಲ್ಲೊಡವೆ ಸಹಿತೀ
ತಡಿಯೊಳಿದೆ ನೋಡೆಂದು ಚರ ತಾ
ನುಡಿಯೆ ಸಂತಸಬಟ್ಟು ನಿತ್ಯಾಲೋಕ ಪುರಿಗಾಗಿ ।
ನಡೆಯೆನುತಲಾ ವೈಶ್ಯ ಪತಿಯುವ
ನೊಡನೆ ಬಂದಾ ಭೂಮಿಪಾಲಕ
ನಡಿಗೆರಗಲಾ ಸಖನು ಬಿಗಿಯಪ್ಪಿದನು ಲೀಲೆಯಲಿ ॥ ೧೨೧

ಅರಸನಾ ಶ್ರೀದತ್ತನನು ಸ
ತ್ಕರಿಸಿ ತನುಜೆಯ ಕೈಯೊಳಿತ್ತೆಲೆ
ಪರಮ ಸಖ ನಿನಗೆನಗೆ ಭೇದಗಳುಂಟೆ ಮತ್ಸುತೆಗೆ ।
ಪುರುಷರತ್ನವನಾ ಪುರದೊಳನು
ಕರಿಸೆನುತಲಾ ಸುತೆಯ ವೃತ್ತಾಂ
ತರವನೊರೆದತಿಶಯದಿ ಬಿಗಿದಪ್ಪಿದನು ಕೋಮಲೆಯ ॥ ೧೨೨

ವರ ಕುಮಾರಿಗೆ ವಿವಿಧ ರತ್ನಾ
ಭರಣ ವಸ್ತ್ರಾದಿಗಳ ಮೇಳದ
ತರುಣಿಯರ ಸಾಸಿರವನಿತ್ತೆಲೆ ಮಗಳೆ ನಿನ್ನ ಪಿತ ।
ವರ ವಣಿಗ್ವರನೀತನೆಂದಾ
ದರದೊಳೊಪ್ಪಿಸಿ ಕೊಟ್ಟು ಮಂಗಳ
ತರದಪೂರ್ವದ ವಸ್ತುಗಳ ನೊಲಿದಿತ್ತು ಕಳುಹಿದನು ॥ ೧೨೩

ಗರುಡವೇಗನ ಬೀಳುಕೊಂಡಾ
ಪರದನಾ ಸುಕುಮಾರಿ ಸಹಿತಾ
ಪುರಕೆ ಬಂದಂಗನೆಗೆ ತದ್ವೃತ್ತಾಂತವೆಲ್ಲವನು ।

ಅರುಹಿ ಕಾಷ್ಠಾಂಗಾರನಾಜ್ಞೆಯೊ
ಳುರು ಸೊಯಂಬರಕೆಸೆವ ಲಗ್ನವ
ಧರಣಿಯಮರರ ಕರೆಸಿ ನಿಶ್ಚೈಸಿದನು ಲೀಲೆಯಲಿ ॥ ೧೨೪

ಬಳಿಕ ವಾಣಿಜ ವರನು ನೃಪ ಸಂ
ಕುಳಕೆ ಲೇಖವ ಬರೆಸಿ ಪಾವುಡೆ
ಗಳನೆಸಗಿ ಗಂಧರ್ವದತ್ತೆಯ ವರ ಸ್ವಯಂವರಕೆ ।
ಕೊಳಲಿಗೈತಹುದೆಂದು ಸಾರಿಸ
ಲೊಲಿದು ಮಣಿಹಾರರನು ಬೇಗದಿ
ಕಳುಹಿ ತದನುಜ್ಞೆಯಲಿ ಶೃಂಗಾರಿಸಿದನಾ ಪುರವ ॥ ೧೨೫

ಸಾರ ಕಸ್ತೂರಿಯ ಸುಗಂಧದ
ಸಾರಣೆಯ ಕುಂಕುಮ ಜವಾಜಿಯ
ಕಾರಣೆಯ ಮಣಿಮಯದ ನೆಲಗಟ್ಟುಗಳ ರಚನೆಗಳ ।
ಕೇರಿ ಕೇರಿಯ ಬೀದಿಗಳ ಘನ
ಸಾರ ಧೂಳಿಯ ಹರವುಗಳ ಪ
ನ್ನೀರ ಚಳೆಯದೊಳೆಸೆದುದಾ ಪುರವರಸ ಕೇಳೆಂದ ॥ ೧೨೬

ವರ ಕನಕ ನವರತ್ನಮಯ ವಿ
ಸ್ಫುರಿತ ವಜ್ರ ಸ್ತಂಭಗಳ ಕಂ
ಡರಣಿಗಳಲೊಪ್ಪಿರ್ದ ರಸುಮಿಪ ವಜ್ರಧಾರೆಗಳ ।
ಮೆರೆವ ಭೃಂಗಾವಳಿಯ ಮುಕುರೋ
ತ್ಕರದ ಘಂಟೆ ವಿಚಿತ್ರ ಭಿತ್ತಿಯ
ಸುರುಚಿರದ ವೈವಾಹ ಮಂಟಪವೆಸೆದುದೊಗ್ಗಿನಲಿ ॥ ೧೨೭

ಹೊಳೆವ ರೋಹಣ ಗಿರಿಯೊ ಭೂತಲ
ಕಿಳಿದ ಪುಷ್ಪಕವೋ ರತೀಂದ್ರನ
ನಿಳಯವೋ ದಿನಕರನ ರಥವೋ ಮೇಘದೊಡ್ಡುಗಳೋ ।
ತಳಿತ ಸುರಚಾಪವೊ ಸುವರ್ಣಾ
ಚಲವೊ ತಾರಾ ಮಂಡಲವೊ ತಾ
ನಿಳೆಗಿದೆನೆ ವೈವಾಹ ಮಂಟಪವೆಸೆದುದೊಗ್ಗಿನಲಿ ॥ ೧೨೮

ಸೌರಭಾನ್ವಿತದಾಮ್ರ ನವ ಮಂ
ದಾರ ಕದಳೀ ಸ್ತಂಭಗಳ ಕ
ರ್ಪೂರ ಪೂಗದ ತೊಲೆಯಶೋಕಾದಿಗಳ ಪಟ್ಟಿಗಳ ।
ವಾರಿಜೋತ್ಪಲದರಲ ಹೊದಕೆಯ
ಸೇರಿಸಿದ ಬಲ್ಲಾಳದಡ್ಡಿಗ
ಳೋರಣದಿ ಮೆರೆದಿರಲು ಚಪ್ಪರವೆಸೆದುದೊಗ್ಗಿನಲಿ ॥ ೧೨೯

ಪುರದ ಬಹಿರುದ್ಯಾನ ವನದಲಿ
ಪರಿ ಪರಿಯ ಮಣಿ ಮಂದಿರದ ಉ
ಪ್ಪರಿಗೆಗಳನೊಲವಿನಲಿ ಸಕಲ ನೃಪಾಲ ಸಂಕುಲಕೆ ।
ತರ ತರದಿ ವಿರಚಿಸುವ ಮಂಗಳ
ಕರದ ವಿವಿಧ ದ್ರವ್ಯಗಳ ವಿ
ಸ್ತರದೊಳಾ ಶ್ರೀದತ್ತನೆಸಗುತ್ತಿರ್ದನೊಲವಿನಲಿ ॥ ೧೩೦

ಧರಣಿಪತಿ ಕೇಳಿತ್ತ ನಗರಾಂ
ತರಗಳಲಿ ಗಂಧರ್ವದತ್ತೆಯು
ವರ ಸ್ವಯಂವರಕವನಿಪಾಲರು ರಾಜಪುರ ವರಕೆ ।

ಭರವಸದಿ ಬಹುದೆಂದು ಚರರು
ಬ್ಬರಿಸಿ ಸಾರುತ್ತಿರಲು ಕೇಳ್ದತಿ
ಹರುಷದಲಿ ಭೂಮಿಪರು ತೆರಳುತ್ತಿರ್ದರೊಲವಿನಲಿ ‖ ೧೩೧

ತ್ವರಿತದಲಿ ಬರ್ಪಖಿಳ ಭೂಮೀ
ಶ್ವರರ ಚಾತುರ್ಬಲದ ಭಾರಕೆ
ಧರೆ ರಸಾತಲಕದ್ದು ದಾಶಾ ಕರಿಗಳೊರಗಿದುವು ।
ಉರಗ ಪತಿ ತಲೆವಾಗಿದನು ತ
ದ್ಭರದೊಳಾ ಕಮಠೇಂದ್ರನೆದೆ ನೆರೆ
ಬಿರಿದುದೆನಲುಗ್ಗಡದಿ ನಡೆದುದು ಸಕಲ ನೃಪ ಕಟಕ ‖ ೧೩೨

ತೆರಹ ಬಿಡು ಸಮ್ಮುಖ ಮುಖಾ ಎಂ
ದುರುಬಿ ಹೊಯ್ಯುತ ಕನಕ ದಂಡೋ
ದ್ಧರರುಲಿಯೆ ಕವಿ ಗಮಕಿ ವಾಗ್ಮಿಗಳೈದೆ ಕೊಂಡಾಡೆ ।
ಅರರೆ ಭಲರೇ ಧಿರು ಧಿರೇದ
ಬ್ಬರಿಸೆ ಭಟ್ಟರು ಭೂಸುರಾವಳಿ
ನೆರೆಯೆ ಮಂತ್ರಾಕ್ಷತೆಗಳಿಂದ್ಯೈತಂದರವನಿಪರು ‖ ೧೩೩

ಧರಣಿ ಪಾಲರು ಕೆಲರೊಳೊಬ್ಬೊ
ಬ್ಬರ ಸುತೇಜೈಶ್ವರ್ಯ ಬಲ ಸೌಂ
ದರಿಯುವೀಕ್ಷಿಸಿ ನಾಚಿ ನೆರೆ ಮಾನಗುಂದಿ ನಾವಿಂದು ।
ಮರಳಬೇಕೀ ಭೂಮಿಪಾಲಕ
ರಿರಲು ನಮ್ಮನದಾರರಿವರೆಂ
ದಿರದೆ ಜರಿದೊಳಸರಿಯ ಬಗೆದರು ಭೂಪ ಕೇಳೆಂದ ‖ ೧೩೪

ಮರಳಲನುಗೆಯ್ದಾ ನೃಪರು ಶಂ
ಬರ ವಿರೋಧಿಯ ಶರದಿ ನೊಂದೆವೆ
ಜರಿದು ಮುನ್ನ ಸರೋಜಭವ ಭಾಳದಲಿ ಬರೆದುದನು ।
ಒರಸಲಾರಳವೀಕೆ ತಮಗನು
ಕರಿಸಿದಪಳೋ ತಮ್ಮ ಭಾಗ್ಯವ
ನರಿವರಾರೆಂದೊಸೆದು ಮಗುಳದೆ ಬಂದರೊಗ್ಗಿನಲಿ ॥ ೧೩೫

ಧರಣಿ ಪಾಲಕರಿಂತು ವಿಭವದಿ
ಬರಲು ಕಾಷ್ಠಾಂಗಾರ ಸಹಿತಾ
ಪರದ ವಿಭವದೊಳಿದಿರುಗೊಂಡುಪಚರಿಸಿ ಮಣಿಮಯದ ।
ಅರಮನೆಯೊಳವರವರ ಹವಣರಿ
ದರಸುಗಳ ನೆರೆ ಬಿಡಿಸಿ ವಾಣಿಜ
ವರನು ನಾಂದೀಮುಖವ ಬಳಿಕೊಂದಿಸಿದನೊಲವಿನಲಿ॥ ೧೩೬

ಪರಮ ಶಾಸ್ತ್ರ ಕ್ರಮದಿ ಭೂಮಿಾ
ಸುರರು ಮುದದಿಂ ಪೂರ್ವ ವೇದಿಯ
ವಿರಚಿಸಲು ಶ್ರೀದತ್ತನಾ ಮರು ದಿವಸ ದೂತರನು ।
ಕರೆದು ಭೂಪರ ಪಾಳೆಯದೊಳಂ
ಬುರುಹ ಮುಖಿಯ ಸುಭಾಗ್ಯದಬ್ಧಿಯ
ಸಿರಿಯ ಪರಿಣಯವೆನುತ ಸಾರುವುದೆಂದು ನಿಯಮಿಸಿದ॥ ೧೩೭

ವರ ವಣಿಗ್ವರನಾಜ್ಞೆಯಿಂದಾ
ಚರರು ಡಂಗುರವೆಸಗಿ ಕಾಂತೆಯ
ಪರಮ ಸೌಭಾಗ್ಯದ ಲಸತ್ಪೀಯೂಷ ವಾರ್ಧಿಯಲಿ ।

ಭರದಿ ಮುಳುಗಿ ಕೃತಾರ್ಥರಹುದೆಂ
ದರಸುಗಳ ಪಾಳೆಯದೊಳತಿ ವಿ
ಸ್ತರದಿ ಸಾರುತ್ತಿರ್ದರಬಲಾ ಮಣಿಯ ಸಡಗರವ ॥ ೧೩೮

ಈ ತೆರದಿ ಸಾರಲ್ಕೆ ಕೇಳಿ ಮ
ಹೀತಳೇಶರು ಮೇಘ ರವವನು
ಚಾತಕಂಗಳು ಕೇಳಿದಂತಾನಂದ ಲೀಲೆಯಲಿ ।
ನೂತನಾಂಗೋದ್ಭವನವೊಲು ನಾ
ನಾ ತೆರದಿ ಕೈಗೆಯ್ದು ವಿಭವದೊ
ಳಾತತುಕ್ಷಣ ಮಂಟಪಕೆ ಬರುತಿರ್ದರೊಲವಿನಲಿ ॥ ೧೩೯

ಶರಧಿ ರತ್ನಸ್ತೋಮದಿಂದಂ
ಬರವು ಭಗಣಾನೀಕದಿಂ ವಿ
ಸ್ಫುರಿತ ಮೇರು ಸುರ ದ್ರುಮಾವಳಿಯಿಂದೆ ಕಾಸಾರ ।
ವರ ಮರಾಳದೊಳುರ್ವಿ ರೋಹಣ
ಗಿರಿಯೊಳೆಸೆವಂದದಲಿ ಮಂಟಪ
ಮೆರೆದುದಖಿಳ ನೃಪಾಲರಿಂದವನೀಶ ಕೇಳೆಂದ ॥ ೧೪೦

ಧರಣಿಪತಿ ಕೇಳೀಚೆಯಲಿ ಪರಿ
ಪರಿಯ ಶೃಂಗಾರಾನ್ವಿತದಿ ತ
ನ್ನೆರಡು ಪಾರ್ಶ್ವದಿ ಮುದದೊಳೈನೂರ್ವರು ಕುಮಾರಕರು ।
ಬರೆ ಗಜೇಂದ್ರನನಡರಿ ಜಿತ ಶಂ
ಬರನವೊಲು ಜೀವಂಧರನು ತ
ನ್ನರಮನೆಯ ಭರದಿಂದ ಹೊರವಟ್ಟನು ಸುಲೀಲೆಯಲಿ॥ ೧೪೧

ವಿಭವದಿಂದೀ ಪರಿಯೊಳಂಗಜ
ನಿಭನು ಗಜದಿಂದಿಳಿದು ಭೂಪರ
ಸಭೆಯ ಮಧ್ಯದ ಸಿಂಹ ಪೀಠವನಡರೆ ದೇವರೊಳು ।
ಅಭವ ಜಿನಪತಿ ಮೆರೆವ ವಿಧದಿಂ
ದಭಿನವ ಕ್ಷಿತಿಪಾಲ ನಿಚಯದೆ
ಸುಭಗ ಜೀವಂಧರನು ರಂಜಿಸಿದನು ಸುತೇಜದಲಿ ॥ ೧೪೨

ಅರಸ ಕೇಳಾ ಪರಿಯುನಂದು
ರ್ವರೆಯ ಭೂಮಿಪರಿಪ್ಪ ಮಣಿ ವಿ
ಸ್ಫುರಿತ ಶುಭ ಮಂಟಪದ ಮಧ್ಯದಿ ಘೋಷವತಿಯೆಂಬ ।
ಮೆರೆವ ಮಣಿಮಯ ವೀಣೆಯನು ತಂ
ದಿರಿಸಿ ಸುತ್ತ ವಿಪಂಚಿ ನಿಚಯವ
ನೆರಹಿ ಗಂಧಾಕ್ಷತೆಗಳಿಂದರ್ಚಿಸಿದರೊಲವಿನಲಿ ॥ ೧೪೩

ಭಾಸುರದೊಳಾ ವೀಣೆಯನು ಧರ
ಣೀಸುರರು ನೆರೆದರ್ಚಿಸಲು ಪರಿ
ತೋಷದಿಂದಲ್ಲಿಗೆ ಸಮಸ್ತ ಕಲಾ ವಿಶಾರದರು ।
ದೇಶ ದೇಶದ ಮಾಗಧರು ಪರಿ
ಹಾಸಕಾರರು ವಾದಿಗಳು ಸುವಿ
ಳಾಸದಿಂದೈತಂದು ಮುಸುಕಿತು ಚಾರು ಚಪ್ಪರವ ॥ ೧೪೪

ಭಟರುಗಳು ವಿದ್ವಾಂಸುಗಳು ವಾ
ಕ್ಪಟುಯುತರು ಪಾಠಕರು ವಿಬುಧೋ
ತ್ಕಟ ವಿಶಾರದರಮಳ ಗುಣಯುತರೆಸೆವ ನಾಗರಿಕ ।

ವಿಟವಿದೂಷಕ ಪೀಠಮರ್ದನ
ನಟ ಗಮಕಿ ಗಾಯಕರು ಮಿಗೆ ಸಂ
ಕಟಿಸಿ ಮೆರೆದುದು ಚಪ್ಪರದೊಳವನೀಶ ಕೇಳೆಂದ ॥ ೧೪೫

ಧರಣಿಪತಿ ಕೇಳ್ ಮೇಲೆ ಸುರ ಕಿ
ನ್ನರ ಗರುಡ ಗಂಧರ್ವ ವಿದ್ಯಾ
ಧರ ಖಚರ ಕಿಂಪುರುಷ ಯಕ್ಷರು ಸಿದ್ಧ ಸಾಧ್ಯಾಳಿ ।
ವರ ಮನು ಗಣಾಧಿಪರು ಮೇಣ್ ಗಣ
ವರರು ತಾರಾ ಗ್ರಹ ಸುರಾಂಗನೆ
ಯರು ವಿಲಾಸದಿ ನೆರೆದರೆಸೆವ ವಿಮಾನ ಪಙ್ಕ್ತಿಯಲಿ ॥ ೧೪೬

ವರ ರಸ ಸ್ಥಾಪನೆಯ ಹಸ್ತಾ
ದ್ಯುರುತರಾಕ್ಷಿ ಪ್ರಸರದಾ ಪರಿ
ಪರಿಯ ಚಿತ್ರದ ಸಾತ್ವಿಕಾಂಗದ ಸುಗತಿ ವಿಭ್ರಮದ ।
ಸ್ಥಿರ ವಿಷಮ ಸಮಕರಣ ಲಯ ಗತಿ
ತಿರುಪು ಕುಸುರಿ ಕಳಾಪಗಳಲಾ
ತರುಣಿಯರು ನರ್ತಿಸಿಯೆ ಮೆಚ್ಚಿಸಿದರು ಮಹಾ ಸಭೆಯ ॥ ೧೪೭

ಲಲಿತ ವೀಣಾ ವಾದ್ಯ ರವ ಕೋ
ಮಲ ಮೃದಂಗ ಧ್ವನಿ ನಟ ಪ್ರಜ
ದುಲುಹು ತಾಳದ ಘೋಷ ಕಹಳಾರಾವ ಗೀತ ರವ ।
ಸುಲಲಿತದಿ ನರ್ತಿಸುವ ಕಾಂತಾ
ವಳಿಯ ಕಂಕಣ ನೂಪುರ ಧ್ವನಿ
ಯೊಲವಿನಿಂದುರೆ ಮುತ್ತಿ ಮುಸುಕಿತು ಚಾರು ಚಪ್ಪರವ ॥ ೧೪೮

ಚಾರು ಸ್ವರ್ಗದ ಸೌಖ್ಯವೋ ಸಂ
ಸಾರ ಫಲವೋ ವಿತತ ಕಾವ್ಯದ
ಸಾರವೋ ನೂತನ ಲಸತ್ಸುಧೆಯೋ ರಸಾವಳಿಯ !
ವಾರಿಧಿಯೊ ತ್ರೈಲೋಕ್ಯ ಸಾರಾ
ಸಾರವೋ ತೂರ್ಯತ್ರಯದ ವಿ
ಸ್ತಾರವೋಳಾಪ ಪ್ರಸೌಖ್ಯವ ಹೊಗಳ್ವನಾರೆಂದ ॥ ೧೪೯

ಇದು ವಿನಮದಮರೇಂದ್ರ ಶ್ರೀ ಜಿನ
ಪದ ಕಮಲ ಷಟ್ಚರಣ ವಾಣೀ
ವದನ ದರ್ಪಣ ಭೂಸುರೋತ್ತಮ ಬಸವಣಾಂಕ ಸುತ ।
ಚದುರ ಭಾಸ್ಕರ ರಚಿತ ಧರ್ಮ
ಪ್ರದನ ಜೀವಂಧರನ ಚರಿತೆಯೊ
ಳಿದು ಸೊಯಂವರ ಮಂಟಪಸ್ತುತಿಯ ರಸಕೇಳೆಂದ ॥ ೧೫೦

---

# ಲಘು ಟಿಪ್ಪಣಿ

---

## ಪೀಠಿಕೆ

**ಕಾವ್ಯ ಮತ್ತು ಕವಿ.**—ಭಾಸ್ಕರನೆಂಬ ಕವಿಯು ಭಾಮಿನೀ ಷಟ್ಪದಿಯಲ್ಲಿ ಬರೆದಿರುವ ಈ ಕಾವ್ಯದಲ್ಲಿ, ರಾಜಪುರಿಯ ಸತ್ಯಂಧರ ರಾಜನ ಮಗನಾದ ಜೀವಂಧರನ ಚರಿತ್ರೆಯನ್ನು ವರ್ಣಿಸಿದ್ದಾನೆ. ಈ ಕಾವ್ಯವು ವಾದೀಭ ಸಿಂಹಸೂರಿ ಎಂಬ ಕವಿಯು ಸಂಸ್ಕೃತದಲ್ಲಿ ರಚಿಸಿದ ಇದೇ ಹೆಸರಿನ ಕಾವ್ಯದ ಕನ್ನಡ ಪರಿವರ್ತನೆಯೆಂದು ಭಾಸ್ಕರ ಕವಿಯು ಹೇಳುತ್ತಾನೆ. ಇದರಲ್ಲಿ ೧೮ ಸಂಧಿಗಳೂ ೧೦೦೦ ಪದ್ಯಗಳೂ ಇವೆ.

ಈ ಕವಿಯು ಜೈನ ಬ್ರಾಹ್ಮಣನು, ಬಸವಾಂಕನ ಮಗನು, ಪೆನುಗೊಂಡೆಯ ಸ್ಥಳದವನು; ಈ ಕವಿತೆಯನ್ನು ಶಕ ೧೩೪೬ರಲ್ಲಿ (ಎಂದರೆ, ಕ್ರಿ.ಶ. ೧೪೨೪ರಲ್ಲಿ) ರಚಿಸಿದಂತೆ ಕವಿಯು ಹೇಳುತ್ತಾನೆ.

**ಭಾಮಿನೀ ಷಟ್ಪದಿ.**—ಈ ಪದ್ಯದಲ್ಲಿ ಆರು ಪಾದಗಳೂ, ಪ್ರತಿ ಅರ್ಧಪದ್ಯದ ಮೂರು ಪಾದಗಳಲ್ಲಿಯೂ ಕ್ರಮವಾಗಿ ೧೪, ೧೪, ೨೩ ಮಾತ್ರೆಗಳೂ ಇವೆ. ಪ್ರತಿ ಅರ್ಧಪದ್ಯದ ಕಡೆಯ ಪಾದದ ಕಡೆಯ ಅಕ್ಷರವು ಲಘುವಾಗಿದ್ದರೂ ಗುರುವನ್ನಾಗೆಣಿಸಬೇಕು.

**ಪೂರ್ವ ಕಥಾ ಸೂಚನೆ.**—ಜಿನ ಭಕ್ತನಾದ ಮಗಧೇಂದ್ರನು ರಾಜ್ಯವಾಳುತ್ತಿರುವಾಗ, ಒಂದು ದಿನ ವಿಪುಳಾದ್ರಿಯಲ್ಲಿರುವ

ಜಿನ ಪುಣ್ಯಭೂಮಿಗೆ ಪರಿವಾರದೊಡನೆ ಹೋಗಿ ಜಿನಪತಿಯನ್ನು ಸ್ತುತಿಸಿ ಸುಧರ್ಮ, ಗೌತಮ ಮೊದಲಾದ ಗಣಧರರನ್ನು ವಂದಿಸಿ, ಅಲ್ಲಿ ತಪಸ್ಸು ಮಾಡುತ್ತಿದ್ದ ತೇಜೋಮಯನಾದ ಒಬ್ಬ ಮುನಿಯನ್ನು ಕಂಡು, ಗೌತಮನನ್ನು ಕುರಿತು, "ಲೋಕದಲ್ಲಿ ತಪಸ್ಸು ಮಾಡುವುದು ಮನುಷ್ಯರಿಗೆ ಕರ್ತವ್ಯವು ; ಚಿದ್ರೂಪನಾದ ಈ ದೇವನು ತಪವನ್ನಾಚರಿಸಲು ಕಾರಣವೇನು ?" ಎಂದು ಕೇಳುವನು. ಅದಕ್ಕೆ ಸುಧರ್ಮ ಗಣಧರನು, "ಈ ತಪಸಿಯು ದೇವನಲ್ಲ, ಮನುಷ್ಯನು" ಎಂದು ಹೇಳಲು, ದೊರೆಯು ಆತನ ಚರಿತ್ರೆಯನ್ನು ತನಗೆ ತಿಳಿಸಬೇಕೆಂದು ಬೇಡುವನು. ಸುಧರ್ಮನು ಇಂತೆಂದು ಹೇಳುವನು :—

(ಸಂಧಿ ೨) ಲವಣ ಸಮುದ್ರದಲ್ಲಿ ಜಂಬೂ ದ್ವೀಪವೂ, ಅದರ ನಡುವೆ ಮಂದರ ಪರ್ವತವೂ, ಅದರ ದಕ್ಷಿಣ ಭಾಗದಲ್ಲಿ ಆರ್ಯಖಂಡವೂ, ಅದರಲ್ಲಿ ಹೇಮಾಂಗದ ದೇಶವೂ ಅದರ ರಾಜಧಾನಿಯಾದ ರಾಜಪುರಿಯೂ ಮೆರೆಯುತ್ತಿರುವುವು. ಆ ಪುರದಲ್ಲಿ ಆ ದೇಶದ ದೊರೆಯಾದ ಸತ್ಯಂಧರನು ವಿಜಯಾವತಿಯೆಂಬ ತನ್ನ ಪತ್ನಿಯೊಡನೆ ಸುಖಿಸುತ್ತಿರುವನು.

(ಸಂಧಿ ೩) "ಈ ಸತ್ಯಂಧರ ರಾಜನು ಅಕಾರಣವಾಗಿ ಪೂರ್ವದ ಮಂತ್ರಿವರ್ಗವನ್ನು ತೊರೆದು ಕಾಷ್ಠಾಂಗಾರನೆಂಬವನನ್ನು ಮುಖ್ಯ ಮಂತ್ರಿಯನ್ನಾಗಿ ಮಾಡಿ, ಈ ದುಷ್ಟನ ಸಂಗದಿಂದ ಕಾಲ ವಶನಾದನು" ಎಂದು ಹೇಳಿದ ಗೌತಮ ಮುನಿಯನ್ನು ಕುರಿತು ಮಗಧ ನೃಪಾಲನು, "ಅಯ್ಯಾ, ಗೌತಮ ಮುನಿಯೇ ! ಪರಿಣತನಾದ ಸತ್ಯಂಧರನು ಕಾಷ್ಠಾಂಗಾರನೆಂಬವನಿಗೆ ಅನುಚಿತವಾಗಿ ಮಂತ್ರೀಶ ಪಟ್ಟವನ್ನು ಏಕೆ ಕಟ್ಟಿದನೆಂಬ ವೃತ್ತಾಂತವನ್ನು

ನನಗೆ ತಿಳಿಸಬೇಕು " ಎಂದು ಬೇಡಿಕೊಳ್ಳಲು ಆ ಮುನಿ ಇಂತೆಂದನು :—

ಸತ್ಯಂಧರನು ರಾಜ್ಯವಾಳುತ್ತಿರುವಾಗ ಆತನ ರಾಜಧಾನಿಯಲ್ಲಿ ಈ ಕಾಷ್ಠಾಂಗಾರನು ಸೌದೆಯನ್ನು ತಂದು ಮಾರಿ ಹೊಟ್ಟೆಹೊರೆದುಕೊಳ್ಳುತ್ತಿದ್ದನು. ಇವನು ಒಂದು ದಿನ ಒಂದು ದೊಡ್ಡ ಸೌದೆಯ ಹೊರೆಯನ್ನು ಕಾಡಿನಿಂದ ಹೊತ್ತುಕೊಂಡು ಬಂದು ವೇಶ್ಯಾರತ್ನವಾದ ಪದ್ಮಾವತಿಯ ಮನೆಯ ಮುಂದೆ ಆ ಹೊರೆಯನ್ನಿಳಿಸಿ ಬಹಳ ಆಯಾಸದಿಂದ ಅಲ್ಲಿ ಕುಸಿದು ಬೀಳುವನು. ಇದನ್ನು ಆ ವೇಶ್ಯೆಯೂ ಅವಳ ವಿಟನೊಬ್ಬನೂ ಉಪ್ಪರಿಗೆಯಿಂದ ನೋಡುವರು. ಆ ವೇಶ್ಯೆಯು, ಇವನಂತೆ ಕಷ್ಟ ಪಡುವವರು ಪ್ರಪಂಚದಲ್ಲಿಯೇ ಇಲ್ಲವೆನ್ನಲು, ಕುಚೇಷ್ಟೆಗಾರನಾದ ಆ ವಿಟನು ನಗುತ್ತ, "ಇವನು ನಿನ್ನನ್ನು ವರಿಸಲು ಬಂದಿರುವನು" ಎನ್ನುವನು. ಆ ವೇಶ್ಯೆಯು ಇದನ್ನು ಕೇಳಿ ಬಹಳ ಹೇಸಿ, ತನ್ನ ವಿಟನನ್ನು ಜರೆದು, ಕಾಷ್ಠಾಂಗಾರನನ್ನು ಅಣಕಿಸಿ ಅವನ ಮೇಲೆ ಉಗುಳುವಳು. ಹೀಗೆ ಅವಮಾನ ಮಾಡಿ ಅವರು ಹಾಸ್ಯದಿಂದ ನಗುತ್ತಿರುವುದನ್ನು ಕೇಳಿ ಕಾಷ್ಠಾಂಗಾರನು ನಾಚಿ ಮನನೊಂದು, ಈ ವೇಶ್ಯೆಯೊಡನೆ ಹೇಗಾದರೂ ಮಾಡಿ ಭೋಗಿಸಬೇಕೆಂದು ನಿರ್ಧರಿಸಿ, ಅದಕ್ಕೆ ಉಪಾಯಗಳನ್ನು ಆಲೋಚಿಸುವನು ; ಹೆಚ್ಚುಹೆಚ್ಚಾಗಿ ಸೌದೆಯನ್ನು ತಂದು ಮಾರಿ, ಆ ವೇಶ್ಯೆಗೆ ಕೊಡುವುದಕ್ಕೆ ಸಾವಿರ ಹೊನ್ನಿನ ಒತ್ತೆಯ ಹಣವನ್ನು ಗಳಿಸುವನು.

ಒಂದು ದಿನ ಇವನು ಆ ಪಟ್ಟಣದ ಚೈತ್ಯಾಲಯದಲ್ಲಿ ಸೇರಿದ್ದ ಮುನಿಗಳ ಬಳಿಗೆ ಹೋಗಿ ಬಹಳ ಭಕ್ತಿಯಿಂದ, ತನ

ಗೊಂದು ಸುವ್ರತವನ್ನು ಅನುಗ್ರಹಿಸಬೇಕೆಂದು ಕೇಳಿಕೊಳ್ಳಲು, ಆ ಯತಿಗಳು, "ಮಗನೇ! ನೀನು ಪೌರ್ಣಮಿಯ ದಿನ ಸ್ತ್ರೀಯೊಡನೆ ಕೂಡಬೇಡ; ಈ ಸುವ್ರತವನ್ನು ಉಲ್ಲಂಘಿಸದೆ ನಡಿಸಿಕೊಂಡು ಬಾ" ಎಂದು ಹೇಳಲು, ಕಾಷ್ಠಾಂಗಾರನು ಮಹಾ ಪ್ರಸಾದವೆಂದು ಅಲ್ಲಿಂದ ಹೊರಡುವನು. ಕೆಲವು ಕಾಲ ದಲ್ಲಿ, ನಾನಾ ಉಪಾಯಗಳಿಂದ ತಕ್ಕಷ್ಟು ಹಣವನ್ನು ಗಳಿಸಿ, ತಿಳಿದವರಿಂದ ವಿಟ ಕಲೆಯನ್ನು ಕಲಿತು, ಒಂದು ದಿನ ತಕ್ಕಂತೆ ಅಲಂಕರಿಸಿಕೊಂಡು ಆ ಸೂಳೆಯ ಮನೆಗೆ ಹೋಗಿ, ಅವಳ ಮನೆಯ ಬಾಗಿಲಲ್ಲಿ ಕಟ್ಟಿದ್ದ ಚಿನ್ನದ ಗಂಟೆಯನ್ನು ಬಾರಿಸು ವನು. ಚೇಟಿಯರು ಬಂದು ಅವನಿಂದ ಒತ್ತೆಯ ಹಣವನ್ನು ಪಡೆದು ಅವನನ್ನು ಮರ್ಯಾದೆಯಿಂದ ಒಳಗೆ ಕರೆದುಕೊಂಡು ಹೋಗಿ ಮಣಿ ಮಂಚದ ಮೇಲೆ ಕುಳ್ಳಿರಿಸುವರು. ಆಗ ಅಲ್ಲಿ ನಡೆಯುತ್ತಿದ್ದ ಮಾತುಗಳಿಂದ, ಆ ದಿನ ಪೂರ್ಣಿಮೆಯೆಂದು ಕಾಷ್ಠಾಂಗಾರನಿಗೆ ತಿಳಿಯಬರಲು, ಅವನು ಮನಸ್ಸಿನಲಿ, "ಮುನಿಗಳು ನಿಯಮಿಸಿದ ವ್ರತವು ಕೆಡದಂತಾಯಿತಲ್ಲಾ! ನನ್ನ ಭಾಗದಲ್ಲಿ ದೇವರಿರುವನು" ಎಂದು ಬಹಳ ಸಂತೋಷ ಪಟ್ಟು, "ಈ ಸ್ತ್ರೀಗೆ ಹಣ ಕೊಟ್ಟಾಗಲೇ ಇವಳೊಡನೆ ಕೂಡ ಬೇಕೆಂದು ನಾನು ಮಾಡಿದ್ದ ಪ್ರತಿಜ್ಞೆಯು ಸಂದಿತು; ಈ ಅಲ್ಪ ಸುಖಕ್ಕೆ ನಾನು ಮನವಿತ್ತರೆ ಗುರುವಿನಿಂದ ಪಡೆದ ವ್ರತವು ಕೆಟ್ಟು ನರಕಕ್ಕೆ ಹೋಗುವೆನು; ಆದುದರಿಂದ, ಮನ್ಮಥನನ್ನು ಗೆದ್ದು, ಈ ಸೂಳೆಯ ಮೋಹಕ್ಕೊಳಗಾಗದೆ ಇರುವೆನು" ಎಂದು ಮನಸ್ಸು ಮಾಡಿ ಮೌನದಿಂದ ಮುಸುಕಿಟ್ಟು ಮಲಗು ವನು. ಸೂಳೆಯು ಬಂದು ಇವನ ಸ್ಥಿತಿಯನ್ನು ನೋಡಿ ಬಹಳ

ಬೆರಗಾಗಿ, "ಇವನಿಂದ ಹಣವನ್ನು ಪಡೆದು ಇವನೊಡನೆ ನಾನು ಕೂಡದಿದ್ದರೆ ಮಹಾ ಪಾತಕಿಯಾಗುವೆನು" ಎಂದು ಎಷ್ಟು ಪ್ರಯತ್ನ ಮಾಡಿದರೂ ಸಫಲವಾಗದೆ, ಮೈಮರೆತು ಮಲಗಲು, ಕಾಷ್ಠಾಂಗಾರನು ಮಧ್ಯರಾತ್ರಿಯಲ್ಲೆದ್ದು ಹೊರಟು ಹೋಗುವನು.

ಸೂಳೆಯು ಎಚ್ಚತ್ತು ನಲ್ಲನನ್ನು ಕಾಣದೆ, ಕೆಟ್ಟೆನೆಂದು, ದೊರೆಯಾದ ಸತ್ಯಂಧರನ ಬಳಿಗೆ ಬಂದು ತನ್ನ ವೃತ್ತಾಂತವನ್ನು ತಿಳಿಸಿ, ಇಂತಹ ಆಶ್ಚರ್ಯವನ್ನು ತಾನಿದುವರೆಗೂ ಕಾಣೆನೆನ್ನುವಳು. ಇದನ್ನು ಕೇಳಿ ದೊರೆಯು ನಗುತ್ತ, ಆ ಪಟ್ಟಣದ ಹೆಬ್ಬಾಗಿಲುಗಳೆಲ್ಲವನ್ನೂ ಮುಚ್ಚಿಸಿ, ಒಂದನ್ನು ಮಾತ್ರ ತೆರೆಯಿಸಿ, ಆ ಸ್ತ್ರೀಯನ್ನು ಕುರಿತು, "ಈ ರಾತ್ರಿ ನಿನ್ನ ಬಳಿಗೆ ಬಂದಿದ್ದವನ ಗುರುತನ್ನು ತಿಳಿದಿದ್ದರೆ, ತೆರೆದಿರುವ ಊರಬಾಗಿಲ ಬಳಿ ನೀನು ನಿಂತಿದ್ದು ಅವನು ಅಲ್ಲಿಂದ ಹೊರಗೆ ಹೊರಡುವಾಗ ಅವನ ಸೆರಗನ್ನು ಹಿಡಿದುಕೊ" ಎಂದು ಹೇಳಿ, ಆ ದಿನ ಆ ಪಟ್ಟಣದಲ್ಲಿ ಯಾರಾದರೂ ಗಂಡುಸರಿದ್ದರೆ, ಅವರನ್ನು ದಂಡಿಸುವೆನೆಂದು ಸಾರಿಸಲು, ಎಲ್ಲರೂ ಹೊರಗೆ ಹೊರಡುವರು. ಪದ್ಮಾವತಿಯು ಇದನ್ನು ನೋಡುತ್ತ ತನ್ನ ವಿಟನನ್ನು ನಿರೀಕ್ಷಿಸುತ್ತಿರುವಲ್ಲಿ, ಹೆಗಲ ಮೇಲೆ ಕೊಡಲಿಯನ್ನೂ ಕೈಯಲ್ಲಿ ಹಗ್ಗವನ್ನೂ ತಲೆಯ ಮೇಲೆ ಕಂಬಳಿಯನ್ನೂ ಧರಿಸಿ, ಹಿಂದಿನಂತೆಯೇ ಹೋಗುತ್ತಿದ್ದ ಕಾಷ್ಠಾಂಗಾರನನ್ನು ಹಿಡಿದು ದೊರೆಯ ಬಳಿಗೆ ತಂದು ನಿಲ್ಲಿಸುವಳು. ದೊರೆಯು ಅವನನ್ನು ವಿಚಾರಣೆ ಮಾಡುವಲ್ಲಿ, ಕಾಷ್ಠಾಂಗಾರನು ಎಲ್ಲ ಸಂಗತಿಗಳನ್ನೂ ವಿವರಿಸಿ ವೇಶ್ಯಾವೃತ್ತಿಯನ್ನು ಹಳಿಯುವನು. ದೊರೆಯು ಆಶ್ಚರ್ಯಪಟ್ಟು, ಅವನ

ಧೈರ್ಯಕ್ಕೂ ಚಲಕ್ಕೂ ಮೆಚ್ಚಿ, ಮುಂದಕ್ಕೆ ಪರೀಕ್ಷಿಸದೆ, ಕೂಡಲೆ ಅವನಿಗೆ ಮಂತ್ರಿಪಟ್ಟವನ್ನು ಕಟ್ಟುವನು.

(ಸಂಧಿ ೪) ಸತ್ಯಂಧರನು ಮಹಾ ವಿಷಯಲಂಪಟನಾಗಿ, ಮಂತ್ರಿಗಳ ಮಾತನ್ನು ಕೇಳದೆ, ಕಾಷ್ಠಾಂಗಾರನಿಗೆ ಮಂತ್ರಿಪಟ್ಟವನ್ನು ಕಟ್ಟಿ ರಾಜ್ಯವನ್ನು ಅವನಿಗೊಪ್ಪಿಸುವನು. ಇತರ ಮಂತ್ರಿಗಳು ವ್ಯಸನದಿಂದ ಹೊರಟುಹೋಗುವರು. ಒಂದು ದಿನ ಸತ್ಯಂಧರನ ರಾಣಿಯು ಬಂದು, ಮುರಿದುಬಿದ್ದಿದ್ದ ಒಂದು ಅಶೋಕ ವೃಕ್ಷವು ಚಿಗುರಿ ಅದರಲ್ಲಿ ಎಂಟು ಹೂಮಾಲೆಗಳು ಹೊರಟಂತೆ ಹಿಂದಣ ರಾತ್ರಿ ತನಗೆ ಕನಸುಬಿದ್ದಿತೆಂದು ಹೇಳಿ, ಅದರ ಫಲವನ್ನು ತಿಳಿಸಬೇಕೆಂದು ದೊರೆಯನ್ನು ಕೇಳುವಳು. ಅದಕ್ಕೆ ದೊರೆಯು, ಆಕೆಗೆ ಒಬ್ಬ ಮಗನು ಹುಟ್ಟುವನೆಂದೂ, ಆ ಮಗನಿಗೆ ಎಂಟು ಮಂದಿ ಹೆಣ್ಣುಮಕ್ಕಳು ಹುಟ್ಟುವರೆಂದೂ ತಿಳಿಸುವನು ಅಶೋಕ ವೃಕ್ಷವು ನೆಲಕ್ಕೆ ಬಿದ್ದಿದ್ದುದರ ಫಲವೇನೆಂದು ರಾಣಿಯು ಬಹಳ ವ್ಯಸನದಿಂದ ಕೇಳಲು, ದೊರೆಯು ತನಗೆ ತಿಳಿಯದೆಂದು ಹೇಳಿ, ತನಗುಂಟಾಗುವ ಕೇಡನ್ನು ಮನಸ್ಸಿನಲ್ಲಿ ಚಿಂತಿಸಿ ವ್ಯಥೆಪಡುವನು ; ಚಿಂತಾ ಭರದಿಂದ ಮೂರ್ಛೆಹೊಂದಿದ ಪತ್ನಿಯನ್ನು ಸಂತೈಸಿ ಆಕೆಯೊಡನೆ ಎಂದಿನಂತೆ ಸುಖ ಸಲ್ಲಾಪಗಳನ್ನು ತೋರ್ಪಡಿಸುತ್ತಿರುವನು.

ಕಾಲ ಕ್ರಮದಲ್ಲಿ ವಿಜಯಾವತಿಯು ಗರ್ಭವನ್ನು ಧರಿಸುವಳು. ಇದನ್ನು ಕಂಡು ದೊರೆಯು ಆಕೆಯ ಕನಸಿನ ಫಲವು ತೋರಿದುದನ್ನರಿತು ವಿಚಾರಪರನಾಗಿ, ದೇಶವು ಕ್ರೂರ ಕಾಷ್ಠಾಂಗಾರನ ವಶವಾಗಿರುವುದರಿಂದ, ಆಕೆಯ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೆ ರಾಜ್ಯ ದೊರೆಯುವ ಸಂಭವವಿಲ್ಲವೆಂದು ತಿಳಿದು,

ತನ್ನ ವಂಶವನ್ನಾದರೂ ಉಳಿಸಿಕೊಳ್ಳಬೇಕೆಂಬ ಆಲೋಚನೆ ಯಿಂದ, ಒಂದು ಕೇಕೀ ಯಂತ್ರವನ್ನು ಬಹಳ ಕೌಶಲದಿಂದ ಮಾಡಿಸುವನು. ಆ ಯಂತ್ರವು ಆಕಾಶಕ್ಕೆ ನೆಗೆದು ಉದ್ಯಾನದ ಲ್ಲಿಳಿದು ಮರಳಿ ಪಟ್ಟಣಕ್ಕೆ ಬರುವಂತೆ ಅಳವಡಿಸಲ್ಪಟ್ಟಿರು ವುದು. ಅದರಲ್ಲಿ ತನ್ನ ಪತ್ನಿಯನ್ನು ಕುಳ್ಳಿರಿಸಿ ಉದ್ಯಾನಕ್ಕೆ ಕಳುಹಿಸಿ, ತಾನೂ ಸಕಲ ಪರಿವಾರದೊಡನೆ ಅಲ್ಲಿಗೆ ಹೋಗಿ ಆಕೆಗೆ ಪುಂಸವನಾದಿ ಕರ್ಮಗಳನ್ನು ಮಾಡಿಸುವನು. ಈ ರೀತಿ ಯಾಗಿ ಪ್ರತಿ ದಿನವೂ ತನ್ನ ಪತ್ನಿಯನ್ನು ಮಯೂರ ಯಂತ್ರದಲ್ಲಿ ಉದ್ಯಾನಕ್ಕೆ ಕರೆದುಕೊಂಡು ಹೋಗಿ ಆಕೆಯೊಡನೆ ಸರಸ ಸಲ್ಲಾಪಗಳನ್ನಾಡುತ್ತ ಆಕೆಯ ದುಃಖವನ್ನು ಮರೆಯಿಸಿ, ರಾಜ್ಯ ವನ್ನು ಕಾಷ್ಠಾಂಗಾರನಿಗೊಪ್ಪಿಸುವನು. ದುಷ್ಟನಾದ ಈ ಕಾಷ್ಠಾಂಗಾರನು ಆ ರಾಜ್ಯದ ಸಕಲ ಮಹೀಪತಿಗಳನ್ನೂ ಮಂತ್ರಿಗಳನ್ನೂ ಭಟರು ಮೊದಲಾದವರೆಲ್ಲರನ್ನೂ ಉಪಾಯ ದಿಂದ ತನ್ನ ವಶ ಮಾಡಿಕೊಂಡು, ತಾನೇ ದೊರೆಯಾಗಬೇಕೆಂಬ ಬಯಕೆಯಿಂದ, ದೊರೆಯನ್ನು ಕೊಲ್ಲಬೇಕೆಂದಾಲೋಚಿಸಿ, ಇತರ ಮಂತ್ರಿಗಳ ಬುದ್ಧಿವಾದವನ್ನು ಕೇಳದೆ, ಮದನನೆಂಬವನಿಗೆ ಚತುರಂಗ ಬಲವನ್ನೆಲ್ಲ ಕೊಟ್ಟು ದೊರೆಯ ವಧೆಗಾಗಿ ಅವನನ್ನು ಕಳುಹಿಸುವನು. ದೊರೆಯು ಕಂಗೆಟ್ಟು, ತಾನು ಮಾಡಿದ ತಪ್ಪನ್ನರಿತು, ಯತ್ನವಿಲ್ಲದೆ ಅವನನ್ನೆದುರಿಸಬೇಕಾಗುವುದು. ಆಗ ತನ್ನ ಪತ್ನಿಯ ದುರ್ದಶೆಯನ್ನಾಲೋಚಿಸಿ, ಕೇಕೀ ಯಂತ್ರ ವನ್ನು ತರಿಸಿ, ಆಕೆಯನ್ನು ಅದರಲ್ಲಿ ಕುಳ್ಳಿರಿಸಿ, ಕೀಲನ್ನು ತಿರುಗಿಸಿ ಆ ಯಂತ್ರವನ್ನು ಮೇಲಕ್ಕೆ ಬಿಟ್ಟು, ದೊರೆಯು ಸೈನ್ಯದ ಮೇಲೆ ಬಿದ್ದು ಬಹಳ ಸೈನ್ಯವನ್ನು ನಾಶಗೊಳಿಸಿ, ಕೊಲೆ

ಗೆಲಸವು ಹೇಯುವೆಂದು ಚಿಂತಿಸಿ, ಸಂಸಾರವನ್ನು ಜರೆದು, ವೈರಾಗ್ಯವನ್ನು ಹೊಂದಿ, ರಣರಂಗ ಮಧ್ಯದಲ್ಲಿ ಶಸ್ತ್ರಸಂನ್ಯಾಸ ಮಾಡಿ, ಪದ್ಮಾಸನವನ್ನು ಹಾಕಿಕೊಂಡು ಯೋಗನಿಷ್ಠೆಯಿಂದ ಕುಳಿತು, ಸಂಸಾರವನ್ನುಕಳೆದು, ದಿವ್ಯ ಸಂಪತ್ತನ್ನು ಪಡೆಯು ವನು. ಪ್ರಾಣವಿಲ್ಲದ ದೊರೆಯ ಶರೀರವನ್ನು ಕಂಡು ಅರಿ ಭಟರು ಆ ಶವವನ್ನು ಬಾಣಗಳಿಂದ ಕೆಡಹುವರು.

————

## ಪೂರ್ವ ಕಥಾ ಸೂಚನೆ

(ಸಂ.) = ಸಂಸ್ಕೃತ ; (ದ್ಭ.) = ತದ್ಭವ.

೧. ನೃಪೇಂದ್ರ ಚಂದ್ರ ಗೆ—ರಾಜಶ್ರೇಷ್ಠನಿಗೆ; ಅಜೇಯನೆನಿಪ—ಯಾರಿಂದಲೂ ಸೋಲಿಸಲಾಗದ ; ಸುಧರ್ಮ ಮುನಿಪನು —ಸುಧರ್ಮನೆಂಬ ಮುನಿಶ್ರೇಷ್ಠನು ; ವಾಯಿಯಿಂದ—ವಿಸ್ತಾರವಾಗಿ(?); ಅರುಹು—ಹೇಳು.

೨. ರಾಜರಾಜನ ಪುರ—ಕುಬೇರನ ರಾಜಧಾನಿಯಾದ ಅಲಕಾವತಿ ; 'ರಾಜಪುರಿ' ಎಂಬ ಹೆಸರಿನ ಪಟ್ಟಣ ; ಮಹಿ—ಭೂಮಿ ; ರಾಜಮಣಿ—ರಾಜರಲ್ಲಿ ರತ್ನಪ್ರಾಯನಾದ ; ಒಲವು—ಪ್ರೀತಿ.

೩. ಹವಣು—(ಪ್ರಮಾಣ, ಸಂ.), ಯೋಗ್ಯತೆ; ತೆರನ—ರೀತಿಯನ್ನು.

೪. ಕಾಷ್ಠಾಂಗಾರ —(ಕಾಷ್ಠ—ಸೌದೆ; ಕಾಷ್ಠಗಾರ ?); ಸುರ ಪುರವ ಎಯ್ದಿದನು—(ಸ್ವರ್ಗಕ್ಕೆ ಹೋದನು), ಸತ್ತನು.

### ಐದನೆಯ ಸಂಧಿ

ಸೂಚನೆ॥ ವನ—ಕಾಡು; ವಣಿಕ್—ವೈಶ್ಯ; ವಿಶಾರದ—ಪಂಡಿತ.

೧. ನಾಕ ಸ್ತ್ರೀ—ಅಪ್ಸರ ಸ್ತ್ರೀ ; ನೆರೆಯೆ—ಸೇರಲು ; ಪರಿಜನ—ಸುತ್ತಲಿರುವ ಬಂಧುಗಳೂ ಮಿತ್ರರೂ ; ಇಶ್ವರಿಯ—'ಐಶ್ವರ್ಯ' ಎಂಬ ಪದದ ಅಪಭ್ರಂಶ ರೂಪ ; ಆರೆಗಳಿಗೆಗೆ ಐಶ್ವರಿಯ ಸಂಪದವು ಅವನೀಶ ಸಹಿತ ಅಳಿದುದು ;ಸುಡಲೆಂದ—(ಸುಡಲಿಎಂದ), 'ಉಪಯೋಗವಿಲ್ಲ' ಎಂಬ ಅರ್ಥ.

೨. ಪುರುಷ ರೂಪು ಇಂದು ಉರಿದುಹೋದುದು ; ಅಗಲತ್ತು—(ಅಗಲತು), ಬಿಟ್ಟುಹೋಯಿತು ; ಕಲ್ಪ ಕುಜ—ಬೇಡಿದುದನ್ನು ಕೊಡುವ ಕಲ್ಪವೃಕ್ಷದಂತಿದ್ದ (ದೊರೆಯು); ಒರಗಿತು—ಬಿದ್ದಿತು ; ಚೂಡಾ ರತ್ನವು (ಶಿರೋಭೂಷಣವು) ಇಂದು ಒಡೆದು ಉರುಳಿದುದು ; ಅಳಲಿತು—ದುಃಖಪಟ್ಟಿತು.

೩. ಹರನ (ಈಶ್ವರನ) ಸಮಂ, ಅಮರೇಂದ್ರನ ಎಣೆ ; ಮುರಹರ— (ಮುರಾಸುರನನ್ನು ಕೊಂದ) ವಿಷ್ಣು; ಜಯಂತನ—ಇಂದ್ರನ ಮಗನ ; ಭಾಸ್ಕರ—ಸೂರ್ಯ ; ಮೃಗಾಂಕ—(ಜಿಂಕೆಯನ್ನು ಗುರುತಾಗುಳ್ಳ) ಚಂದ್ರನ ; ಪಿತಾಮಹನ—ಬ್ರಹ್ಮನ ; ಸಮ, ಎಣೆ, ಪಾಟಿ, ಒರೆ, ಜೋಡು, ನಿಭ, ಸರಿ, ಈಡು—ಇವೆಲ್ಲವೂ ಒಂದೇ ಅರ್ಥದ ಪದಗಳು ; ಹುಲು—(ಹುಲ್ಲಿಗೆ ಸಮಾನ ರಾದ), ಶಕ್ತಿಯಿಲ್ಲದ.

೪. ಹರ್ಮ್ಯ—ಉಪ್ಪರಿಗೆ ; ವಿಲೋಲ—ತೂಗಾಡುತ್ತಿರುವ ; ಹಂಸಾ ವಳಿಯ ತಲ್ಪ—ಮೃದುವಾದ ಹಂಸೆಯ ತುಪ್ಪುಳಿನಿಂದ ಮಾಡಿದ ಹಾಸಿಗೆ ; ಆವಳಿ—ಸಮೂಹ; ಕಳ—ಯುದ್ಧಭೂಮಿ ; ಭೂತ— ಪಿಶಾಚ ; ಹರಳು—ಕಲ್ಲಿನ ಚೂರು.

೫. ಸುದತಿ—(ಅಂದವಾದ ಹಲ್ಲುಗಳನ್ನುಳ್ಳವಳು, ಸ್ತ್ರೀ), ಹೆಂಡಿತಿ ; ಕೂಡಿ (ಒಡನೆ) ಇಂದು ಅರಸ ; ಅಪರಾಹ್ಣ—ಮಧ್ಯಾಹ್ನಾ ನಂತರದ ಹಗಲು; ವಿಧಿ—ಅದೃಷ್ಟ, ಹಣೆಯ ಬರೆಹ; ಲೋಭ— ಅತ್ಯಾಸೆ; ಮಾಯಾ—ಮೋಸ ; ಮದ—ಅಹಂಕಾರ ; ಜಗವು ಏಕೆ ಒಂದಿ(ಕೂಡಿ)ಇಹುದು ?

೬. ಕೆಲರು ಅಮಾತ್ಯರು ಇವನು ಖಳನು ಎಂದು ತಿಳುಹೆ ; ಅರಿದರಿದು—ತಿಳಿದು ತಿಳಿದೂ ; ಇಳೆಯೆಸಗಿ—ರಾಜ್ಯವನ್ನೊಪ್ಪಿಸಿ ; ನೆರೆ—ಹೆಚ್ಚಾಗಿ ; ವಿಷ ಮೇಲಪ್ಪುದು—ವಿಷವು ಹೆಚ್ಚುವುದು ; ಅಂತೆ ಆ ಖಳರ (ನೀಚರ) ಸಾಕಿದ ನೃಪರಿಗೆ ಇನಿತು(ಇಷ್ಟೇ) ಎಂದು.

೭. ಕೊಂಡು ಉಯ್ದು—ಎತ್ತಿಕೊಂಡು ಹೋಗಿ ; ತರುಣಿ—(ಸ್ತ್ರೀ), ವಿಜಯಾವತಿ ; ಆರೈದು—ಪರೀಕ್ಷಿಸಿ.

೮. ವಿಬುಧ ಜನ—ಪಂಡಿತರಿಗೆ ; ಮಂದಾರ—(ಕಲ್ಪವೃಕ್ಷದಂತಿರುವ ವನು), ಕೇಳಿದುದನ್ನು ಕೊಡುವವನು ; ಗಂಭೀರ ಪಾರಾವಾರ (ಸಮುದ್ರ)—ಅತ್ಯಂತ ಗಂಭೀರನಾದವನು ; ಕಾಂತ—

ಪ್ರಿಯ ; ರಸಿಕ—ಸಾರ ವಸ್ತುಗಳಲ್ಲಿ ಅಭಿರುಚಿಯುಳ್ಳವನು ; ಸುಭಗ—ಪುಣ್ಯವಂತ ; ಧೀರ ಉದಾರ ; ನವ್ಯ—(ಅಪೂರ್ವವಾದ), ಅಸಾಮಾನ್ಯವಾದ ; ಹಂಬಲಿಸು—ವ್ಯಥೆಪಡು ; ಹರಿಣ—ಜಿಂಕೆ.

೯. ಮುಗ್ಗು—(ಕುಂದು), ಕಾಣದೆ ಹೋಗು ; ಸಿರಿ—ಶ್ರೀ (ಸಂ.), ಐಶ್ವರ್ಯ; ಸಪ್ತಾಂಗ—ಒಡೆಯ, ಮಂತ್ರಿ, ಸ್ನೇಹಿತರು, ಭಂಡಾರ, ರಾಷ್ಟ್ರ, ಕೋಟೆ, ಸೈನ್ಯ—ಇವು ಏಳೂ ರಾಜ್ಯಕ್ಕೆ ಅಂಗಗಳು ; ಸಂದೋಹ—ಸಮೂಹ ; ಅಗಲಿತು—ಬಿಟ್ಟುಹೋಯಿತು ; ವಿಭವ—ಮಹಿಮೆ.

೧೦. ತರುಣಿಯ ; ಅಕ್ಕೆ—ಅಳು ; ಸರ—(ಸ್ವರ, ಸಂ.), ದನಿ ; ಬಳಿವಿಡಿದು—ಅನುಸರಿಸಿ, ಬರುವ ಸ್ಥಳವನ್ನು ಗೊತ್ತು ಮಾಡಿಕೊಂಡು ; ಭೀಕರ—ಭಯಂಕರವಾದ ; ನಿವಹ—ಗುಂಪು ; ಒಲಿದು—ಆಸಕ್ತಿಯಿಂದ ; ಮೋಹ—(ಅವಕ್ಕೆ ಸ್ವಾಭಾವಿಕವಾದ) ಅಪೇಕ್ಷೆ ; ಭೂವರನ ಕೇಳಿದಳು—ದೊರೆ ಎಲ್ಲಿರುವನೆಂದು ಕೇಳಿದಳು ; ವಿಯೋಗ ವಿಕಳ—(ತನ್ನಿಂದ) ಅಗಲಿರುವುದರಿಂದುಂಟಾದ ಮನೋವ್ಯಥೆ.

೧೧. ರಘೂದ್ವಹ—(ರಘುಕುಲೋತ್ತಮನಾದ) ರಾಮ; ಕಂಡವನು—ಕಂಡದುದನ್ನೆಲ್ಲ ; ತರುಣಿಯನು—(ಯುವತಿಯನ್ನು), ತನ್ನ ಹೆಂಡಿತಿಯನ್ನು ; ಬೆಸಗೊಂಡನೆನಲು—ಕೇಳಿದನು ಎಂದರೆ ; ತರಳೆ—ಚಂಚಲೆ, ಮನಸ್ಸು ಸ್ತಿಮಿತವಾಗಿಲ್ಲದವಳು; ಮುಗ್ಧೆ—ಏನೂ ತಿಳಿಯದವಳು ; ಮರುಳಹುದು—ಬುದ್ಧಿಭ್ರಮೆಗೊಳ್ಳುವುದು.

೧೨. ಕೇಕೀ ಯಂತ್ರ—ನವಿಲನಾಕಾರದಲ್ಲಿ ಮಾಡಿದ್ದ ಆಕಾಶಗಮನದ ಯಂತ್ರ ; ಅಲಘು—(ಸಣ್ಣದಲ್ಲದ), ದೊಡ್ಡದಾದ ; ಕಂಗೆಟ್ಟು—(ಕಣ್ಣು ಕೆಟ್ಟು), ವ್ಯಥೆಪಟ್ಟು ; ಹಳುವ—ಕಾಡು ; ನಿಳಯ—ಮನೆ; ಉಳಿ—ಬಿಡು ; ಬಳಿ—ಸಮೀಪ ; ವನದಲ—ಕಾಡಿನಲ್ಲಿ ; ಅಂತರಿಸು—ಒಳಗೆ ಹೋಗು ; ವಿಕಳ—ವ್ಯಥೆ.

೧೩. ಲಲನೆ—ಸ್ತ್ರೀ ; ದೇಹಗಳ . . . . . . ಬೇರುಂಟೆ—ಹೆಂಡತಿಯು ಗಂಡನ ನೆರಳಿನಂತಿರುವವಳಲ್ಲವೆ ? (ಎಂದರೆ, ಯಾವಾಗಲೂ ಅವನೊಡನೆಯೇ ಇರತಕ್ಕವಳು) ; ಇಳೆಯ ಪತಿ—ಭೂಪನೇ ! ಬರಿದೆ—ಸುಮ್ಮಸುಮ್ಮನೆ, ಕಾರಣವಿಲ್ಲದೆ ; ನೀನು ಇಂತು ಬಿಡಲು (ಬಿಟ್ಟರೆ) ತನಗೆ ಅಸು(ಪ್ರಾಣ) ತೊಲಗದಿಹುದೇ ?

೧೪. ಹಳುವ—ಕಾಡು ; ಅಂ ; ಅರಸೆ—ಹುಡುಕುತ್ತಿರುವಲ್ಲಿ ; ಮೆಳೆ—ಪೊದರು ; ಕುಂದೆ—ಕೊರತೆಯೇನು ? ಅಹಿತವೆಸಗಿದೊಡೆ—ಅಪ್ರಿಯವಾದುದನ್ನು ಮಾಡಿದ್ದರೆ ; ಉಳಿವುದುಚಿತವೆ—ನನ್ನನ್ನು ಬಿಡುವುದು ನ್ಯಾಯವೆ ? ಬರಿದೆ—ಅಕಾರಣವಾಗಿ ; ಸೆಳಸು—ಸೆಣಸು, ಕೋಪ.

೧೫. ಪುರುಷ—ಪತಿಯೇ ! ಮಾರುತ ಗಿರಿಕೆನಲು—ಗಾಳಿಯಿಂದ ಗಿರಕ ಎಂದು ಶಬ್ದವಾದರೆ ; ಉರುತರದಿ—ಅತಿಶಯವಾಗಿ ; ವಿಪಿನಾಂತರ— ಕಾಡಿನ ಮಧ್ಯೇ ; ಪತಿಯು—ಪತಿಯುನ್ನು.

೧೬. ನಟ್ಟಡವಿ—(ನಡು+ಅಡವಿ), ಕಾಡಿನ ಮಧ್ಯೇ ; ವೈರಿ ಘರಟ್ಟ—ಶತ್ರುಗಳಿಗೆ ಬೀಸುವ ಕಲ್ಲಿನಂತಿರುವವನೇ (ಎಂದರೆ, ಮೃತ್ಯು ಪ್ರಾಯನು) ; ನೆರೆ ಬಿಟ್ಟು—ಒಡನಿರದೆ ; ಪದವೆಂತಿದ್ದುದು—ಕಾಲು ಹೇಗೆ ಬಂದಿತು ? ಪದ—ಪಾದ ; ನಿಟ್ಟೆಗೊಂಡು ಅಗಲಿಸಿತು—(ದೈವವು) ನಿನ್ನಲ್ಲಿ ನನಗಿರುವ ಪ್ರೇಮಾಸಕ್ತಿಯನ್ನು ಹಿಡಿದು ನನ್ನನ್ನು ನಿನ್ನಿಂದ ಬೇರೆಮಾಡಿತು; ನಿಟ್ಟೆ(ದ್ಭ.); ನಿಷ್ಠಾ (ಸಂ.) ; ವೈದೋರಿ—ಕಾಣಿಸಿಕೊಂಡು.

೧೭. ಕರಿಯೆ—ಆನೆಯೇ ! ಕರಿಪತಿ ಯಾನನನು—ಗಜಶ್ರೇಷ್ಠವನ್ನು ಹತ್ತಿ ಸವಾರಿಮಾಡುವವನನ್ನು ; ಹರಿ—ಸಿಂಹವೇ ! ; ಹರಿಸಹಸ್ರ ಬಲಾನ್ವಿತನ—ಸಾವಿರ ಸಿಂಹಗಳ ಬಲದಿಂದ ಕೂಡಿದವನನ್ನು ; ಪಿಕ—ಕೋಗಿಲೆಯೇ ! ಪಿಕಾಳಾಪ—ಕೋಗಿಲೆಯಂತೆ(ಮನೋಹರವಾಗಿ) ಮಾತನಾಡುವವನು ; ಚಕ್ರವೆ—ಚಕ್ರವಾಕ ಪಕ್ಷಿಯೇ ! ; ಚಕ್ರಧರ ನಿಭನ—(ಚಕ್ರಾಯುಧವನ್ನು ಧರಿಸಿರುವ) ವಿಷ್ಣುವಿನ ಸಮಾನನನ್ನು ; ಹರಿಣ—ಜಿಂಕೆಯೇ ; ಹರಿಣಾಂ

ಕಾಸ್ಯ—(ಜಿಂಕೆಯ ಗುರ್ತುಳ್ಳ) ಚಂದ್ರನಂತೆ ಮುಖವುಳ್ಳವನು; ಭಾಸುರ ಶುಕ—(ಪ್ರಕಾಶಮಾನವಾದ) ಅಂದವಾದ ಗಿಣಿ; ಶುಕ ವಾಣಿ—(ಗಿಣಿಯ ಮಾತುಗಳಂತೆ) ಇಂಪಾದ ಮಾತು ಗಳನ್ನಾಡುವವನು; ವಿಸ್ತರದಿ—ಚೆನ್ನಾಗಿ.

೧೮. ತಿಲಕ—ತಿಲಕ ವೃಕ್ಷವೇ!; ತಿಲಕ—ಶ್ರೇಷ್ಠ; ಅರ್ಜುನ—ಮತ್ತಿಯ ಗಿಡ; ದೋರ್ಬಲ—ತೋಳಿನ ಬಲದಲ್ಲಿ; ಜಿತಾರ್ಜುನ ನನು—ಅರ್ಜುನನನ್ನು ಮೀರಿಸಿದವನನ್ನು; ಸುಕೇತಕಿ—ಒಳ್ಳೆಯ ಕೇದಿಗೆಯ ಗಿಡವೇ! ವಿಜಯ ಕೇತನ—ವಿಜಯಧ್ವಜ ವುಳ್ಳವನು (ಎಂದರೆ, ಯಾವಾಗಲೂ ಜಯಶಾಲಿಯಾದವನು) ಕಂಕೆಲಿ ದ್ರುಮ—ಅಶೋಕ ವೃಕ್ಷ; ಕಂಕಲ—(ಖಂಕರಿ? ), ಉಂಗುರಗೂದಲು ಉಳ್ಳವಳು; ಅಳಿಕುಳಾಳಕೆ—ತುಂಬಿಗಳ ಗುಂಪಿನಂತೆ ಕಪ್ಪಗಿರುವ ಮುಂಗುರುಳುಳ್ಳವಳು; ತರು—ಗಿಡ.

೧೯. ಇನಿಯ—(ಪ್ರಿಯ), ಪತಿ; ವಿಯೋಗಾಂತರದಿ—ಅಗಲಿರುವ ಕಾಲದಲ್ಲಿ; ನೆರೆ—ಹೆಚ್ಚಾಗಿ; ಕಂಡರನು—ಕಂಡು ಕಂಡವರ ನ್ನು; ಸರಿ—ಹೋಗು; ತತ್ಪ್ರೇತಾವನಿ—ಆ ಸುಡುಗಾಡು.

೨೦. ವಿತಾನಮಯ—ಮೇಲ್ಕಟ್ಟಿನಿಂದ ಕೂಡಿದ; ಮಂದಿರ—(ಮನೆ), ಅರಮನೆ; ಅಬಲೆಯರು ಅಂಘ್ರಿಗಳ ವಿಸ್ತರದೊಳು (ಚೆನ್ನಾಗಿ) ಒತ್ತಲು; ಅಂಚೆವಾಸು—ಹಂಸಗಳ ತುಪ್ಪುಳಿನಿಂದ ಮಾಡಿದ ಹಾಸಿಗೆ; ನೆಣ—ಕೊಬ್ಬು.

೨೧ ಓಲಾಡು—ಈಜಾಡು; ಕಂಬು ಕಂಧರೆ—ಶಂಖದಂತಿರುವ ಕೊರಲುಳ್ಳವಳು; ಎಣಿ—ಸಮ.

೨೨. ಸಾರ—ಉತ್ತಮವಾದ; ಚಂದ್ರೋಪಲ—ಚಂದ್ರಕಾಂತ ಶಿಲೆ; ರಮ್ಯಾಗಾರ—ಮನೋಹರವಾದ ಮನೆ; ಅವತಾರಿಸದೆ—(ಅವತರಿಸದೆ), ಹುಟ್ಟದೆ; ಉದಿಸು—ಹುಟ್ಟು; ಕಂದ—ಬಾಲನೇ! ಚಾರು—ಸಂತೋಷಗೊಳಿಸುವ; ಬಸಿರು—ಹೊಟ್ಟೆ; ಬಾರದೆ ಅತಿ ಪಾಪಾನ್ವಿತೆಗೆ(ಪಾಪದಿಂದ ಕೂಡಿದವಳಿಗೆ).

೨೩. ಜಠರ— ಹೊಟ್ಟೆ ; ಆವ ಅಂದದಲಿ (ರೀತಿಯಲ್ಲಿ) ; ಬಿರುಗಾಳಿಗಳಿಗೆ—ಬಿರುಸಾದ ಗಾಳಿಯಿಂದ ಮರೆಯಾಗುವುದಕ್ಕೆ ; ಉಯ್ವೆನು—ತೆಗೆದುಕೊಂಡು ಹೋಗಲಿ ; ಮುಂಡಾಡು—ಮುದ್ದಾಡು ; ನಂದನ—ಮಗ.

೨೪. ಸರಸಿಜಾಂಬಕಿ—ಕಮಲ ನೇತ್ರೆ ; ಮರುಗು—ವ್ಯಥೆಪಡು ; ಉರುತರದಿ—ಅತಿಶಯವಾಗಿ; ತದ್ಧಾತ್ರಿ ವೇಷದಿ—ಆ(ಆಕೆಯು) ದಾದಿಯ ರೂಪಿನಿಂದ ; ಅಬಲೆ—ವಿಜಯಾವತಿಯು ; { ಹರಣ—ಪ್ರಾಣ (ಸಂ.) ; ಧಾತ್ರಿ, (ಸಂ.), ದಾದಿ (ದ್ಭ.)}

೨೫. ಅಳಲಬೇಡ—ವ್ಯಥೆಪಡಬೇಡ ; ರೇಖಾಳಿ—ಅಂಗೈಯಲ್ಲಿಯ ಗೆರೆಗಳ ಸಾಲು ; ತಾನು ಇವನು ; ನೀಲ ಕುಂತಲೆ—ಕಪ್ಪು ತಲೆಗೂದಲುಳ್ಳವಳು ; ಅರುಹು—ಹೇಳು.

೨೬. ಇರಲ್—ಇರಬಾರದು ; ಆತನಿಂದ ಇಳೆಗೆ ಅರಸು ಅಹನು ; ಬೇಡೆನಬೇಡ—'ತೆಗೆದುಕೊಂಡು ಹೋಗಬೇಡ' ಎಂದು ಹೇಳಬೇಡ ; ಆಕೆಯು ತಿಳುಹೆ—ಆಕೆಗೆ ತಿಳಿಸಲು.

೨೭. ಅರಸಿ—ರಾಣಿ ; ಹಣೆ ಹಣೆಯ ಹೊರಿಸಿ—ಹಣೆಯಮೇಲೆ ತನ್ನ ಹಣೆಯನ್ನಿಟ್ಟು ; ಮಣಿ ಮುದ್ರಿಕೆ—ವಜ್ರದುಂಗುರ ; ತೊಲಗಿದಳು—ಹೋದಳು ; ಬಾಹೆ—ಬಾಹ್ಯ (ಸಂ.), ಅಲ್ಲಿಂದ ಹೊರಗೆ.

೨೮. ಅವತರಿಸಿದ—ಹುಟ್ಟಿದ ; ಆತ್ಮಜನು—ಮಗ ; ಸುವ್ರತಾಖ್ಯ—ಸುವ್ರತನೆಂಬ ಹೆಸರುಳ್ಳ ; ನಿರಾಯುಷರೇಕೆ—ಆಯುಸ್ಸಿಲ್ಲದವರು ಏಕೆ ಆಗುವರು ? ಕರ್ಮವಶ—ಪೂರ್ವ ಜನ್ಮದಲ್ಲಿ ಮಾಡಿದ ಕರ್ಮದ ಅಧೀನ.

೨೯. ತಳೆದು—(ಹೊಂದಿ), ತೆಗೆದುಕೊಂಡು ಹೋಗಿ ; ಅರಸೆ—ಹುಡುಕಿದರೆ ; ಕೈವಶವಪ್ಪನು—ದೊರೆಯುವನು ; ಪ್ರೇತಾವನಿ—ಸುಡುಗಾಡು ; ದೋರ್ವಲನು—ಭುಜ ಬಲವುಳ್ಳ ಆ ವೈಶ್ಯ ನೃಪನು ; ಒಲಿದು—ಪ್ರೀತಿಯಿಂದ ; ಸತಿ—ದಾದಿಯ ವೇಷದಿಂದಿದ್ದ ಸ್ತ್ರೀ.

೩೦. ವಣಿಕ್‌ವರ—ವೈಶ್ಯಶ್ರೇಷ್ಠ ; ತತ್—ಆ ; ಪ್ರೇತಾವನಿ—(ಹೆಣಗಳ ಭೂಮಿ) ; ನಿರ್ಧನ—(ಹಣವಿಲ್ಲದ) ಬಡವನು ; ಮಣಿ—ವಜ್ರ ; ಕಾವು ಕಾವಿಂದ—ಕಾವ್ ಕಾವ್ ಎಂದು ; ಅಳುತಲು ; ದಿಶಾವಳಿ—ದಿಕ್ಕುಗಳ ಸಾಲು.

೩೧. ಪರುಷ—ಸ್ಪರ್ಶವೇದಿ, (ಮುಟ್ಟಿದ ಪದಾರ್ಥಗಳೆಲ್ಲವನ್ನು ಚಿನ್ನವನ್ನಾಗಿ ಮಾರ್ಪಡಿಸುವ ವಸ್ತು) ; ಕೌಸ್ತುಭ—ವಿಷ್ಣುವಿನ ಎದೆಯ ಮೇಲಿರುವ ಆಭರಣ ; ನವ—(ಹೊಸ), ಹೊಳೆಯುತ್ತಿರುವ ; ಕಡವರ—ಚಿನ್ನ ; ಬಿಂಬ—(ಚಂದ್ರ)ಮಂಡಲ ; ನವ—ಅಪೂರ್ವವಾದ ; ಕಂಡರಣೆ—ಕಡೆದು ಮಾಡಿದ ಪ್ರತಿಮೆ; ಲಲಾಮ—(ತಿಲಕ), ಶ್ರೇಷ್ಠ; ತರುಣ ಮನಸಿಜ—ಹೊಸ ಮನ್ಮಥನು ; ಆಕೃತಿ—ಆಕಾರ ; ಮರ್ತ್ಯರು—ಮನುಷ್ಯರು.

೩೨. ದಣಿಯಲು—ತೃಪ್ತಿಹೊಂದುವಂತೆ ; ಆಲೋಕನವೆಸಗಿ—ನೋಡಿ ; ತೃಣ ತ್ರೈಲೋಕ್ಯ—ಮೂರು ಲೋಕವೂ ತೃಣ ಸಮಾನ ; ಋಣ ವಿಶೇಷವಿದು—ಇದು ಪೂರ್ವ ಜನ್ಮದ ಋಣ ; ರೂಪಿಸಿದ—ತಿಳಿಯಪಡಿಸಿದ ; ಸಾಮ್ಯವು ಅದು ಆಯ್ತು—ಅದರಂತೆಯೇ ಆಯ್ತು.

೩೩. ಕರಗಿ—ಮನಸ್ಸು ಕರಗಿ ; ಸೀನಲು—(ಮಕ್ಕಳು ಸೀತರೆ, ತಾಯಂದಿರು ಅವರನ್ನು 'ಚಿರಜೀವಿಯಾಗಿ ಬಾಳು' ಎಂದು ಹೇಳುವ ವಾಡಿಕೆಯುಂಟು) ; ಹರಸಲು, ಆರು(ಹಾಗೆಂದವರು ಯಾರು) ಎಂದು ವಣಿಗ್ವರನು ಈಕ್ಷಿಸಿ (ನೋಡಿ); ಹೆಸರು ಜೀವಂಧರನು ಎಂದು ಇಟ್ಟು ; ಜೀವಂಧರ—(ಜೀವವನ್ನು ಧರಿಸಿದವನು ; ಸತ್ತುಹೋದ ತನ್ನ ಮಗು ಮರಳಿ ಜೀವವನ್ನು ಪಡೆಯಿತು ಎಂಬಂತೆ).

೩೪. ಆತ್ಮಜರ—ಮಕ್ಕಳನ್ನು ; ಮೃತಾರ್ಭಕ—ಸತ್ತ ಮಗು; ಮಸಣ (ದ್ಭ.)—ಶ್ಮಶಾನ (ಸಂ.) ; ಅಸುವೆರಸೆ—ಜೀವವು(ಬೆರಸೆ) ಕೂಡಲು ; ಮಗುಳ್ದು—ಹಿಂದಕ್ಕೆ ; ಕೈವಿಡಿದು ಅಂತ.

೩೫. ತೊಲಗಿದ ಹರಣ—ಹೋದ ಪ್ರಾಣ; ಅಶ್ರು ಜಲವು—ಕಣ್ಣೀರು ; ಒರೆಯೆ—(ಸುರಿಯಲು), ಸ್ರವಿಸಲು ; ತೂಪಿರಿದು—ಅನಿಷ್ಟ ಪರಿಹಾರಕ್ಕಾಗಿ ಊದಿ ಮಂತ್ರಿಸಿ ; ಅರುಹ—ಜಿನ.

೩೬. ಪರಿಸರ—ಸಮೀಪ ; ಕಂಡ—ಕಾಣಿಸಿಕೊಂಡ ; ಅಬರೆ—ಧಾತ್ರಿಯ ರೂಪಿನ ಸ್ತ್ರೀ ; ಭರವಶ—ಮನೋನಿಶ್ಚಯ ; ಸನ್ನಿಧಿ—ಸಮೀಪ ; ಅದೃಶ್ಯವಾದಳು—(ಮಾಯವಾದಳು), ಕಾಣದಂತಾದಳು.

೩೭. ಸುಳುಹು—(ಸಂಚರಿಸುವಿಕೆ), ಇರುವಿಕೆ ; ತನ್ನಿಂ ತಿಳಿದು—ತಾನಾಗಿಯೇ ಮೂರ್ಛೆ ತಿಳಿದು ; ಅಪಹರಿಸಿ—ಬಿಟ್ಟು ಬಿಟ್ಟು ; ವಿವೇಕ ............... ಮನವ—ತನ್ನ ಮನಸ್ಸಿಗೆ ವಿವೇಕವನ್ನು ತಂದುಕೊಂಡಳು.

೩೮. ಹೃದಯದೊಳಗಿಟ್ಟು—ಎದೆಗಪ್ಪಿಕೊಂಡು ; ಅನವರತ—ಯಾವಾಗಲೂ ; ಸರ್ವಜ್ಞ ಹೃದ್ಭಾವನೆ—ಜಿನ ಧ್ಯಾನ ; ದೇವತಾನ್ನ—ಅತ್ಯುತ್ತಮವಾದ ಆಹಾರ ; ಸುಕುಮಾರಿ—ಕೋಮಲವಾದ ಮೈಯುಳ್ಳವಳು ; ವಿನುತ—(ಪ್ರಸಿದ್ಧವಾದ), ಎಲ್ಲರಿಗೂ ತಿಳಿದ ; ತೃಣ ಧಾನ್ಯ—(ಹುಲ್ಲಿನಲ್ಲಿ ಬೆಳೆದ ಧಾನ್ಯ), ಬಡವರು ತಿನ್ನುವ ಕಾಳು ; ಅನುಕರಿಸು—ಮಾಡು ; ತಾಪಸಿ—ತಪಸ್ಸು ಮಾಡುವವಳು.

೩೯. ನಿಳಯ—ಮನೆ ; ಮಂದಾನಿಲ—ಸೂಕ್ಷ್ಮವಾದ ಗಾಳಿ ; ಒಂದಿದಳು—ಸೇರಿದಳು ; ಮಣಿಯ—ರತ್ನದ ; ರವಿ ರುಚಿ—ಸೂರ್ಯಕಾಂತಿ ; ಮುಗ್ಗಿದಳು—ಕುಂದಿದಳು ; ವಿಧಿ—ಹಣೆಯ ಬರೆಹ ; ಕಳೆವರು—ಮೀರುವರು ; ನಿಕರ—ಸಮೂಹ.

೪೦. ನೇಮಿಸು—ಆಜ್ಞೆ ಮಾಡು.

೪೧. ನಿಜ—ತನ್ನ ; ಸನ್ನುತ—ಪ್ರಸಿದ್ಧರಾದ ; ಸಚಿವರ—ಮಂತ್ರಿಗಳ ; ಅಂತಸ್ಸಾರ—ಮನಸ್ಸಿನ ಅಭಿಪ್ರಾಯ ; ಪರಿಜನ—(ತನ್ನ) ಸುತ್ತಲಿರುವ ಜನರ; ಗುಜಿ ಗುಜಿನ—ಗುಜು ಗುಜೆಂದು

ಮೆಲ್ಲಗೆ ಮಾತಾಡಿಕೊಳ್ಳುವ ; ಪ್ರವರ್ತನೆ—ರೀತಿ ; ಅರ ಯಿದು—ನೋಡಿ ತಿಳಿದುಕೊಂಡು; ಅರುಹಿ—ಹೇಳಿ ; ಹದನ— ರೀತಿಯನ್ನು ; ಚರರು—ಸೇವಕರು.

೪೨. ಸುರುಚಿರದಿ—ಸಂಭ್ರಮದಿಂದ ; ನ ರ ನ ದೊ ವ ರ್ ನ—ಒಬ್ಬ ಮನುಷ್ಯನನ್ನೂ ; ಆ ಖಳನು—ನೀಚನಾದ ಆ ಕಾಷ್ಠಾಂಗಾರನು.

೪೩. ಹೊಳಲು—ಪಟ್ಟಣ ; ವಿಭವ—ಉತ್ಸವ ; ಇಂದು—ಈ ದಿನ ; ನೀವು ಇಳೆಯು ಪಟ್ಟವನು ಆಂತ ಸಂತಸ ; ಖಳ ತಿಲಕ—ನೀಚ ಶ್ರೇಷ್ಠನು (ಎಂದರೆ, ಅತಿ ನೀಚನು) ; ರಾಗಿಸಿ—ಪ್ರೀತಿಸಿ ; ಒಲಿದುವನು ಬೇಡೆನೆ—ಇಷ್ಟವಿದ್ದುದನ್ನು ಕೇಳು ಎನಲು.

೪೪. ಸುತನು ಇಂದು ಉದಯಿಸಿದನು ; ಅನಿಬರು—ಎಲ್ಲರೂ ; ಆತನ—ಗಂಧೋತ್ಕಟನ; ಎಸೆದರು—ಪ್ರಕಾಶಿಸಿದರು. ('ಬೆಳೆ' ಎಂಬ ಪದವು ಸಸ್ಯಾದಿಗಳ ಅಭಿವೃದ್ಧಿಯಲ್ಲಿಯೂ, 'ಬಳೆ' ಎಂಬ ಪದವು ಇತರ ಅಭಿವೃದ್ಧಿಯಲ್ಲಿಯೂ ಪ್ರಯೋಗಿಸಲ್ಪಡುತ್ತದೆ.)

೪೫. ಕೇಳು ಐನೂರ್ವರಿಗೆ ; ಮತ—ಅಭಿಪ್ರಾಯ ; ಜಾತಕರ್ಮ— ಹುಟ್ಟಿದಾಗ ಮಾಡುವ ಕರ್ಮ ; ಅನುಕರಿಸಿ—ನೆರವೇರಿಸಿ ; ಹೊಂದೊಡಿಗೆ—ಹೊನ್ನಿನ ತೊಡಿಗೆ (ಆಭರಣ) ; ಚೀನಾಂಬರ— ಚೀನಾ ದೇಶದ ವಸ್ತ್ರ (ಎಂದರೆ, ಅತ್ಯುತ್ತಮವಾದ ವಸ್ತ್ರ) ; ಹೊರೆ—ಪೊರೆ, ಕಾಪಾಡು.

೪೬. ಹರಿಣ ಪಕ್ಷ—ಶುಕ್ಲಪಕ್ಷ ; ಚಂದನ—ಶ್ರೀಗಂಧ ; ಕಲ್ಪ ಕುಜ—ಕಲ್ಪವೃಕ್ಷ ; ಕಪ್ಪುರ—ಕರ್ಪೂರ (ಸಂ.) ; ಶಶಿಕಾಂತಾ ಯತ—ವಿಸ್ತಾರವಾದ ಚಂದ್ರಕಾಂತ ಶಿಲೆ ; ವಿಧದಿ—ರೀತಿ ಯಲ್ಲಿ ; ಚಂದ್ರಿಕೆ—ಬೆಳದಿಂಗಳು ; ಕರುವಿನಂತೆ—ಪುತ್ಥಳಿ (ಬೊಂಬೆ) ಯಂತೆ ; (ಈ ಪದಾರ್ಥಗಳೆಲ್ಲವೂ ಬೆಳ್ಳಗಿರುವವು ಗಳು) ; ಎಳದು+ತಳಿರು (ಚಿಗುರು) ; 'ಧರ್ಮ ಸುಕೇತು' ಎಂಬ ಹೆಸರಿನವನು ; ಆ ಪರಿಯು—ಆ ಪರಿಯಲ್ಲಿ.

೪೭. ಸ್ಯಾದ್ವಾದ ಮಾರ್ಗದಿ—ಜೈನ ಶಾಸ್ತ್ರ ರೀತಿಯಲ್ಲಿ ; ನಡೆಗಲಿತ—ನಡೆಯುವುದನ್ನು ಕಲಿತನು; ನುಡಿಗಲಿತ—ಮಾತಾಡುವುದನ್ನು ಕಲಿತನು; ಉಣ—ಊಟಮಾಡುವುದಕ್ಕೆ; ಸರ್ವೇಶ್ವರನ—ಜಿನನಂತೆ ; ಬೇಳುಡೆಯು—ಉಡುಗೆಯಿಲ್ಲದ ; ಇಡಿದ—(ಚಿತ್ರಗಳು) ತುಂಬಿದ ; ಭಿತ್ತಿ—ಗೋಡೆ.

೪೮. ವಿನುತ—ಪ್ರಸಿದ್ಧನಾದ ; ನಂದಿಯೆನಿಸುವ—ನಂದಿಯೆಂಬ ; ಸನುನಯದೊಳು—ಪ್ರೀತಿಯಿಂದ ; ಸಾಧನವೆನಿಪ—ಉಪಯೋಗಕರವಾದ; ಚೌಷಷ್ಟಿ—ಅರವತ್ತನಾಲ್ಕು; ಅನಿತುವನು—ಎಲ್ಲವನ್ನೂ.

೪೯. ಉಜ್ಜ್ವಳಿಪ—(ಪ್ರಕಾಶಿಸುವ), ಉತ್ತಮವಾದ ; ವಿದ್ಯಾಳಿ—ವಿದ್ಯೆಗಳ ಗುಂಪು ; ಆರ್ಯ—ಪೂಜ್ಯ ; ಕುಲೋನ್ನತಿ—ವಂಶದ ಅತಿಶಯ ; ಸುಲಲಿತ—ಉತ್ತಮವಾದ ; ಅಭ್ಯಂತರ—ಮನಸ್ಸಿನಲ್ಲಿರುವುದು ; ಅವಗೆ ಒಲಿದು (ಪ್ರೀತನಾಗಿ).

೫೦. ಸದಮಳ—ಒಳ್ಳೆಯ ಪರಿಶುದ್ಧ ; ವಿದ್ಯಾಧರ ಕ್ಷೇತ—ವಿದ್ಯಾಧರರೆಂಬ ಖೇಚರರಿರುವ ಪ್ರದೇಶ ; ಭೂಮಿಪ ಲೋಕ ಪಾಲಕನು—ಲೋಕಪಾಲಕನೆಂಬ ದೊರೆ ; ಮೇಘವು ಅನೇಕ ರೂಪದೊಳು ಉದಿಸೆ ; ಹರೆದುದಕೆ—ಕಳೆದುಹೋದುದಕ್ಕೆ.

೫೧. ನರವರರ—ಶ್ರೇಷ್ಠರಾದ ಮನುಷ್ಯರ ; ಜಲಧರ—ಮೇಘ ; ಭೂವರ—ಭೂಪತಿ ; ವೈರಾಗ್ಯ—ಇಹಲೋಕ ವ್ಯಾಪಾರದಲ್ಲಿ ಅಭಿಮಾನವಿಲ್ಲದಿರುವಿಕೆ ; ಆತ್ಮಜ—ಮಗ ; ದೀಕ್ಷೆ—ಜಿನದೀಕ್ಷೆ, ಜಿನ ಧ್ಯಾನ ವ್ರತ ; ಆವರಿಸೆ—ವ್ಯಾಪಿಸಲು.

೫೨. ಕುಟಿಲಾತ್ಮ—ಮೋಸಗಾರ ; ಸಂಸಾರ ಲೋಪನಿಗೆ—ಸಂಸಾರದಲ್ಲಿ ಕುಂದುಂಟಾದವನಿಗೆ ; ಅಂತ್ಯಜ—ಚಂಡಾಲ ; ಅವಿಶಾರದ—ವಿದ್ಯಾ ವಿಹೀನ; ದೋಷಾನುರಕ್ತ—ದೋಷದಿಂದ ಕೂಡಿರುವವನು ; ಭೂತ ವೈರಿ—ಪ್ರಾಣಿಗಳಲ್ಲಿ ದ್ವೇಷವುಳ್ಳವನು ; ಅಷ್ಟ ಮದ—ಅನ್ನ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ,

ರೂಪ, ಉದ್ಯೋಗ, ಇವುಗಳಿಂದ ಹುಟ್ಟುವ ಮದ; ಅನ್ವಿತ —ಕೂಡಿದವನು; ಅದಯಗೆ; ಸಲ್ಲದು—ಒಪ್ಪದು; ಅದು ಅವನಿಯಲಿ ತಾ ವಿಫಲವು.

೫೩. ಅದರಿಂ ಆ; ರುಜಯುತಗೆ—ರೋಗದಿಂದ ಕೂಡಿದವನಿಗೆ; ರಾಜ್ಯಾಂಗನೆಯ ಬಿಟ್ಟಂತೆ ಸುತಪಃಸುದತಿಯನು (ತಪಸ್ಸೆಂಬ ಸ್ತ್ರೀಯನ್ನು); ರುಜಾ ಕ್ಷುಧೆ—ರೋಗದಿಂದುಂಟಾದ ಹಸಿವು; ವಿಘಾತಿಸೆ—(ಹೊಡೆಯಲು), ಪೀಡಿಸಲು, ಮುನಿಯು ಅಖಿಳ ದೋಷದೆ; ಯಥೇಷ್ಟ ಆಚಾರದಲಿ—ಮನಸ್ಸು ಬಂದಂತೆ ನಡೆದು; ಸದನ—ಮನೆ; ಭುಂಜಿಸಲು—ಊಟಮಾಡಲು; ಆ ಮುನಿಯ ರೋಗವು ಹರೆಯದು (ಪರಿಹಾರವಾಗಲಿಲ್ಲ).

೫೪. ನಿಜ ನಿಳಯ—ಸ್ವಂತ ಮನೆ; ಐತರಲು—ಬರಲು; ಆತ್ಮಜರು—ಮಕ್ಕಳು; ತಾವು ಒಲದು; ಎಡೆಗಳು—ಬಡಿಸಿರುವ ಎಲೆ (ತಟ್ಟೆ) ಗಳನ್ನು; ಒಂದಿಸಿರೆ—ಸಿದ್ಧಪಡಿಸಿರುವಲ್ಲಿ; ಒಳಗೆ ಪುಗುತಂದ—ಒಳಕ್ಕೆ ಬಂದ; ಅಳಬಳ—ಅಭಿಲಾಷೆ; ಕುಮಾರಕ ತಿಲಕ—ಕುಮಾರಶ್ರೇಷ್ಠನಾದ ಜೀವಂಧರನು.

೫೫. ಮುನ್ನಲುಂಡು—ಮೊದಲೇ (ಬೇಗನೆ) ಉಂಡು; ಅವಗಡಿಸುತಿರೆ—(ಇನ್ನೂ ಬೇಕೆಂಬ) ಆತುರದಿಂದಿರಲು; ಆ ಕುಮಾರಕರು ಒಡಲನು (ವ್ಯಕ್ತಿಯನ್ನು) ಒಲೆದೊಲೆದು—(ತೂಗಾಡಿಸುತ್ತ) ಉಬ್ಬಿ (ಉತ್ಸಾಹಗೊಂಡು) ಮನೆಗೆ (ಮನೆಯವರಿಗೆಲ್ಲ) ಅಟ್ಟ (ಅಡಿಗೆ ಮಾಡಿದ) ಅಶನವನು (ಆಹಾರವನ್ನು); ತಮ್ಮೈ ನೂರ್ವರಗಲನು—ತಮ್ಮ ಐನೂರು ಮಂದಿಯ ಆಗಲಕ್ಕೂ; ತಾ—ಜೀವಂಧರನು; ಕಬಳ—ತುತ್ತು.

೫೬. ಕರದ—ಕೈಯ್ಯಲ್ಲಿಯ; ತತ್ ಮುನಿವರನ—ಆ ಮುನಿಶ್ರೇಷ್ಠನ; ಕ್ಷುತ್ತೃಷೆ—ಹಸಿವಿನಿಂದುಂಟಾದ ಆಸೆ; ಹಿಂಗೆ—ಕಳೆದು ಹೋಗಲು; ಇದರ್ು ಅದಾವುದು ಪರಿ (ರೀತಿ); ಆತ್ಮದಲಿ—ತನ್ನಲ್ಲಿಯೇ; ಪರಿಕಿಸು—ಪರೀಕ್ಷಿಸು.

೫೭. ವಿಖ್ಯಾತಿ—ಹೆಸರುವಾಸಿ; ವಿಜ್ಞಾನ—ಶಾಸ್ತ್ರಜ್ಞಾನ; ಸಾಮ್ರಾಜ್ಯ ಸಂಪದ—ಚಕ್ರವರ್ತಿತ್ವದ ಸಂಪತ್ತು; ಸುವಿದ್ಯದಿಂದ—ಒಳ್ಳೆಯ ವಿದ್ಯಕ್ಕಿಂತಲೂ; ಅಧಿಕವಿಲ್ಲ—ಹೆಚ್ಚಾದುದಿಲ್ಲ; ಅದ—ಅದನ್ನು, ಆ ವಿದ್ಯೆಯನ್ನು.

೫೮. ವಿಸ್ತರದೊಳು—ವಿಶೇಷವಾಗಿ; ಮೂರ್ಖ(ನು) ತನ್ಮಂದಿರದೊಳು (ಅವನ ಮನೆಯಲ್ಲಿ) ಅಗ್ಗಳನು (ಅಧಿಕನು); ಆ ಪ್ರಭುವು ತನ್ನ ಊರೊಳು ಅತ್ಯಧಿಕ(ನು); ಪರಿಕಿಸಲು—ಯೋಚಿಸಿ ನೋಡಿದರೆ; ವಿಶ್ವದೊಳು—ಪ್ರಪಂಚದಲ್ಲಿ; ಉರುತರದೊಳು—ಅತಿಶಯವಾಗಿ; ಅದರಿಂದ ಈತಂಗೆ ಅಮಳ (ಪರಿಶುದ್ಧವಾದ) ವಿದ್ಯೆಯನು ಒರೆವೆನು (ಹೇಳುವೆನು).

೫೯. ಬೆಡಂಗಿನಿಂದ—ಸೊಗಸಾಗಿ; ಆರ್ಯನಂದಿ—ತಪಸ್ವಿಯಾದ ನಂದಿಯು; ಈತನೇ ತಾನು—ಭಸ್ಮಕರೋಗದ ಮುನಿಯೇ ಈತನು; ಗುರು(ವು) ಶುದ್ಧಿವೆತ್ತ (ರೋಗದಿಂದ ಬಿಡುಗಡೆಯಾದ).

೬೦. ಆಚರಣೆ—ನಡತೆ; ಮೋಕ್ಷಜ್ಞಾನ—(ಸಂಸಾರದಿಂದ) ಬಿಡುಗಡೆ ಹೊಂದುವ ಜ್ಞಾನ; ನರಕ; ಕರ್ಮ ಶುಭಾಶುಭಂಗಳ ತೆರನ—ಶುಭ ಕರ್ಮ ಅಶುಭ ಕರ್ಮಗಳ ರೀತಿಯನ್ನು; ಮೋಕ್ಷದಲಿ—ಮುಕ್ತಿಯಲ್ಲಿ; ಆ ಪ್ರಪಂಚವನು—ಲೋಕಸ್ಥಿತಿಯನ್ನು; ಒರೆಯಬೇಕು—ಹೇಳಬೇಕು.

೬೧. ಧರ್ಮ—ಧರ್ಮವನ್ನೂ; ದಯೆವಡೆದು—ದಯೆಯನ್ನೂ ಪಡೆದು; ಇಟ್ಟು ಒರಸಿ—ನಾಶಗೊಳಿಸಿ; ಹಮ್ಮನು—ಅಹಂಕಾರವನ್ನು; ಇಂದ್ರಿಯವನು—ಪಂಚೇಂದ್ರಿಯಗಳ (ಬಯಕೆಗಳನ್ನು); ಒದೆದು—ದೂರಕ್ಕಟ್ಟಿ; ಎರಡಿಲ್ಲದೆ—ಅಭೇದ ಜ್ಞಾನವುಳ್ಳವನಾಗಿ; ಅಘವ—ಪಾಪವನ್ನು; ಅಳಿದು—ನಾಶಗೊಳಿಸಿ; ದುರ್ಮತವನು—ದುರಭಿಪ್ರಾಯಗಳನ್ನು; ಅಪಹರಿಸಿ—ಕಳೆದು; ಮಾಯದೊಳು—ತಿಳಿಯದಂತೆಯೇ; ಅಮ್ಮುವ—ಪ್ರಬಲವಾಗುವ; ಅರಿಷಡ್ವರ್ಗಮಳಿವ (ಅರಿಷಡ್ವರ್ಗವಂ ಅಳಿವ)—ಕಾಮ

ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ಆರು ಶತ್ರುಗಳನ್ನು ನಾಶಗೊಳಿಸುವ.

೬೨. ತನು—ದೇಹ; ಒಸೆವು—ಸಂತೋಷಿಸಿ ; ವಸ್ತುಗಳನಿತರಲಿ—ಯಾವ ವಸ್ತುವಿನಲ್ಲಿಯೂ ; ಪಸರಿಸಿ—ವಿಸ್ತಾರವಾಗಿ ತಿಳಿಸಿ ; ವಿನಯ ಮಾಡುತ—ವಿಧೇಯನಾಗಿರುತ್ತ; ಅಡಿವಿಡಿದು—(ಪಾದವನ್ನು ಹಿಡಿದು), ಸೇವೆ ಮಾಡುತ್ತ ; ಇತ್ತ—ಕೊಟ್ಟ ; ನೇಮ—ನಿಯಮ (ಸಂ.), ಆಜ್ಞೆ ; ಅನುಕರಿಸಿ—ನಡೆಯಿಸಿ ; ಕನಸಿನಲಿ—ಕನಸಿನಲ್ಲಿಯೂ ; ಮಾರುತ್ತರವನೀಯದೆ—ಹೇಳಿದ್ದಕ್ಕೆ ಪ್ರತಿಯಾಗಿ ಹೇಳದೆ ; ಸನುನಯದೊಳು—ವಿನಯದಿಂದ.

೬೩. ಕಳಾ ವಿದತೆ—ಕುಶಲ ವಿದ್ಯೆಗಳನ್ನು ತಿಳಿದಿರುವಿಕೆ ; ತಾನು ; ಅಳವು—ಶಕ್ತಿ ; ಗುಣವು—ಸದ್ಗುಣವೇ ; ಆಭರಣ—ಒಡವೆ ; ಸುಚರಿತೆ—ಒಳ್ಳೆಯ ಹೆಸರುವಾಸಿಯೇ ; ಸಂಚಲ ಚಿತ್ತವು—ಸ್ತಿಮಿತವಿಲ್ಲದ ಮನಸ್ಸು ; ಅಂಧತ್ವ—ಕುರುಡತನ ; ಮುಳಿಸು—ಕೋಪವೇ ; ಹೊಲೆ—ಅಪರಿಶುದ್ಧತೆ ; ಮೃಷೆ—ಸುಳ್ಳು ಹೇಳುವಿಕೆ ; ರೌದ್ರವು, ಅವು ; ಜೀವನ್ಮೃತವು—ಜೀವದಿಂದಿದ್ದರೂ ಸತ್ತಂತಿರುವಿಕೆ; ಪಿಸುಣತೆ—ಚಾಡಿ ಹೇಳುವಿಕೆ; ಕೊಲೆ ಅದು ಎಲೆ.

೬೪. ಧರೆಗೆ—ಧರೆಯಲ್ಲಿ ; ವಿಜಿತೇಂದ್ರಿಯನೆ—ಎಲ್ಲ ಆಸೆಗಳನ್ನೂ ಜಯಿಸಿದವನೇ; ಸಚ್ಚರಿತ—ಉತ್ತಮವಾದ ನಡತೆಯುಳ್ಳವನು ; ದುರ್ಲಭನು—(ದೊರೆಯದವನು), ಅಸಾಮಾನ್ಯನು ; ಎರಗದವನು—ಆಶೆಪಡದವನು ; ಅಹಿಂಸನ ಜಾತನು—ಹಿಂಸೆ ಮಾಡದಿರುವ ಗುಣವುಳ್ಳವನು; ಅಭಿಮಾನಿ—ದಯಾಶಾಲಿ; ಅದಯನೆ ; ಗರುವನು—ಅಹಂಕಾರಿ ; ಕಾಮಾತುರನೆ ಪಾಪಿ ; ಅತುಳ—ಅಸಾಮಾನ್ಯವಾದ ; ನಯ—ನೀತಿ ; ಕೃತಘ್ನ—ಮಾಡಿದ ಉಪಕಾರವನ್ನೆಣಿಸದವನು ; ನಾರಕಿ—ನರಕಕ್ಕೆ ಬೀಳುವವನು.

೬೫. ಆರು ವರ್ಗವನೊಂದಿ—ಅರಿಷಡ್ವರ್ಗಗಳನ್ನು ಕೂಡಿ ; ದುರ್ವ್ಯಾಪಾರಿಸದೆ—ಕೆಟ್ಟ ನಡತೆಗೆ ಬೀಳದೆ.

೬೬. ಮನ ವಚನ ಕಾಯ—ಮನಸ್ಸು, ಮಾತು, ದೇಹ (ಕಾರ್ಯ); ಕಾಂಚನ—ಹೊನ್ನು; ಲಸತ್‌ದ್ರವ್ಯ—ಬೆಲೆಯುಳ್ಳ ವಸ್ತು; ವಂಚನೆಯುಮಾಡದೆ ಕೊಟ್ಟು; ಕೊಂಡ—ಪ್ರಾಪ್ತವಾದ; ಅನಿತುವನು—ಎಲ್ಲವನ್ನೂ; ಭೇದದ ನೆನೆಹು (ಆಲೋಚನೆ) ಅದು ಇಲ್ಲದೆ; ಅನುಕರಿಸು—ಮಾಡು.

೬೭. ಪಾದಗಳಂ—ಅಷ್ಟ ಪದಗಳನ್ನು; ಈಡಿರಿ—ನಿಗ್ರಹಿಸು; ಸೆಂಡಾಡಿ—(ಚೆಂಡಾಡುವಂತೆ), ಕತ್ತರಿಸಿ; ಮರೆವುಗೆ—ಮರೆಹೊಕ್ಕರೆ, ಶರಣಾಗತರಾದರೆ; ಸಪ್ತ ವ್ಯಸನ(ದುರಾಶೆ)—ಬೇಟೆ, ಜೂಜು, ಸ್ತ್ರೀವ್ಯಸನ, ಮದ್ಯಪಾನ, ಹಾಡುಗಾರಿಕೆ, ನರ್ತನ, ಪರ ನಿಂದೆ; ಕೇಡನು—ಕೆಡಕು ಮಾಡುವವನು; ನಾಡ—ದೇಶವನ್ನು.

೬೮. ಅತ್ಯಾಚಾರಿ - ಸದಾಚಾರವನ್ನು ಬಿಟ್ಟಿರುವವನು; ಅಜ್ಞ—ಅಜ್ಞಾನಿ; ಕುಟಿಲ—ಮೋಸಗಾರ; ಖಳ—ನೀಚ; ಅನ್ಯಾಚಾರಯುತ—ತನ್ನ ಆಚಾರವನ್ನು ಬಿಟ್ಟು ಇತರರ ಆಚಾರವನ್ನನುಸರಿಸುವವನು; ಅಹಿತ—ಶತ್ರು; ಶಠ—ನೀಚ; ಪಾರದ್ವಾರಿ—(ಇತರರ ಮನೆಯ ಬಾಗಿಲನ್ನು ಕಾಯುವವನು), ತನ್ನ ಕೆಲಸಕ್ಕಾಗಿ ಇತರರನ್ನನುಸರಿಸುವವನು; ಕೊಂಡೆಯ—ಚಾಡಿಕೋರ; ಅರಯಲು—ವಿಚಾರ ಮಾಡಿ ನೋಡಿದರೆ; ಇಹಪರವಿಲ್ಲ—ಈ ಲೋಕದಲ್ಲಿಯೂ ಮುಂದಿನ ಲೋಕದಲ್ಲಿಯೂ ಸುಖವಿಲ್ಲ.

೬೯. ಕಾಮುಕ—ಸ್ತ್ರೀವ್ಯಾಮೋಹವನ್ನು ಹೆಚ್ಚಾಗುಳ್ಳವನು; ದುರ್ವಾದಿ—ಕೆಟ್ಟ ವಾದ ಮಾಡುವವನು; ಆತ್ಮ ವಿರಾಮಕಾರಿ—ತನ್ನನ್ನು ತಾನು ತಿಳಿಯದವ; ವಿಬುಧ—ವಿದ್ವಾಂಸ; ನಾಮಧಾರಿ—(ಯೋಗ್ಯತೆಯಿಲ್ಲದೆ) ದೊಡ್ಡ ಹೆಸರನ್ನು ಇಟ್ಟುಕೊಂಡಿರುವವನು; ಮಿಥ್ಯಾದೃಷ್ಟಿ—ಶಾಸ್ತ್ರಕ್ಕೆ ಅಪಾರ್ಥ ಹೇಳುವವನು; ಹೇಮ ಚೋರ—ಚಿನ್ನವನ್ನು ಕದಿಯುವವನು; ಅತುಳ—ಅಸಾಧಾರಣವಾದ; ಗ್ರಾಮಿಣ—(ಹಳ್ಳಿಯವ), ಒರಟ; ಮಹೋದ್ಧತ—ಬಹಳ ಅಹಂಕಾರಿ.

೭೦. ಮೃಷೆ—ಸುಳ್ಳು ಹೇಳುವಿಕೆ; ಮುಳಿಸು—ಕೋಪ; ಅಜ್ಞತೆ—ಅಜ್ಞಾನ; ಆತ್ಮಸ್ತುತ್ಯವು; ಬಕವೃತ್ತಿ—ಮೋಸ; ಪಿಸುಣತನ—ಚಾಡಿಹೇಳುವಿಕೆ; ನುಸುಳು—ಕೃತ್ರಿಮ; ವಿಷಾದ—ಧೈರ್ಯ ಗುಂದಿರುವಿಕೆ; ಕರ್ಕಶ ವಚನ—ಕಠಿನ ವಾಕ್ಕು.

೭೧. ಏಕಾಂತದಲಿ—ಅವನೊಬ್ಬನೊಡನೆಯೇ; ಪಟ್ಟವನು ಒಂದಿದನು (ಪಡೆದನು); ಕುವರ—ಕುಮಾರ (ಸಂ.).

೭೨. ವನಧಿ—ಸಮುದ್ರ; ಓಲಾಡು—ಈಜಾಡು; ತಜ್ಜನಕ—ತನ್ನ ತಂದೆ; ಘುಡುಘುಡಿಸಿ—ಕೋಪದ ದನಿ ಮಾಡುತ್ತ; ಕನಲಿ—ಕೋಪಿಸಿಕೊಂಡು; ಅನುಕರಿಸೆ—ತೋರಿಬರಲು; ಪುರವುರುಹಿದ—ತ್ರಿಪುರಾಸುರರ ಪಟ್ಟಣಗಳನ್ನು ಸುಟ್ಟ.

೭೩. ಇಂದು—ಈ ದಿನ; ಭೂ ಕಾಮಿನಿಗೆ—ಭೂಮಿಯೆಂಬ ಸ್ತ್ರೀಗೆ; ಶಸ್ತ್ರ—ಆಯುಧ; ಅಸ್ತ್ರ—ಬಾಣ; ಪರಿವೃತನಾಗಿ—ಕೂಡಿದವನಾಗಿ; ಎರಗಿ—ನಮಸ್ಕರಿಸಿ.

೭೪ ತರಳ—ಹುಡುಗನೇ! ಅಸಹಾಯಕನು—ಸಹಾಯವಿಲ್ಲದವನು; ಮುನ್ನ (ಇದಕ್ಕೆ ಮೊದಲು) ಆಹವವನು (ಯುದ್ಧವನ್ನು) ಹೊಕ್ಕು ಅರಿಯೆ; ಉದ್ರೇಕಿಸುವುದು—ರೇಗುವುದು; ಅನುಚಿತ—ತಕ್ಕುದಲ್ಲ; ಸ್ಥಿರದೊಳು—ಚಲಿಸದಿರುವ ಮನಸ್ಸಿನಿಂದ; ಆರಯ್ದು— ಪರೀಕ್ಷಿಸಿ; ಅಭ್ಯಂತರವನು—ಒಳ ಸಮಾಚಾರವನ್ನು; ಈಕ್ಷಿಸಿ—ಪರೀಕ್ಷೆಮಾಡಿ; ಅಳವನು—ಶಕ್ತಿಯನ್ನು; ಉರವಣಿಸು—ಮೇಲೆ ಬೀಳು.

೭೫. ಚಾಂಡಾಲವು—ನೀಚತನ; ಅಜ್ಞತೆ—ಅಜ್ಞಾನ; ಜಪ···· ಹತ—ಜಪ ಮೊದಲಾದುವನ್ನು ನಾಶಗೊಳಿಸತಕ್ಕುದು; ಅನುಷ್ಠಾನ—ಆಚರಣೆ; ತ್ರೈವರ್ಗ—ಧರ್ಮ, ಅರ್ಥ, ಕಾಮ; ಭಂಜನ—(ಮುರಿಯುವುದು), ನಾಶಪಡಿಸುವುದು; ಅಪಹಾರಣ—ಅಪಹರಿಸುವುದು,; ಕೋಪದಿಂದ—ಕೋಪಕ್ಕಿಂತಲೂ.

೭೬. ಅರಿಯನು—ಶತ್ರುವನ್ನು; ಒಂದಿಹನು—ಕೂಡಿರುವವನು; ಅರಿಯದುದ ತಾನು ಅರಿವೆನು ಎಂಬವನು; ಎರಗು—ಮೇಲೆ

ಬೀಳು ; ಹಗೆಗೊಂಬನು—ಹಗೆಗಳನ್ನಾಗಿ ಮಾಡಿಕೊಳ್ಳುವವನು ; ಇಹ ಪರವನು ಮರೆವವ(ನು); ಕೇಳದೆ ಹೇಳುವವನು ; ಅನ್ಯರ —(ತನ್ನವರನ್ನು ಬಿಟ್ಟು) ಇತರರನ್ನು; ಹೊರೆವ—ಕಾಪಾಡು ವವನು ; ಮೇಲ—ತನಗೆ ಮೇಲಾಗುವುದನ್ನು ; ಸಂಗರ—ಯುದ್ಧ.

೭೭. ಅದರಿಂ ಇನ್ನು ಅವನ ಅಳ ಬಳವನು (ಶಕ್ತಿಯ ಪ್ರಮಾಣ ವನ್ನು); ಮತವದಲ್ಲ—ತಕ್ಕುದಲ್ಲ ; ವಿದಿತ—(ತಿಳಿದ), ತಕ್ಕ ; ಅದು—ನೀನು ಸ್ಮರಿಸಿಕೊಂಡಿರುವುದು ; ನಾನಾ ವಿಧದಿ ಜೀವಂ ಧರನ ತಿಳುಹಿದನು.

೭೮. ಕಲುಷ—ಮನಸ್ಸಿನ ಮಾಲಿನ್ಯ ; ಬೀಳ್ಕೊಂಡು—ಹೊರಡುವು ದಕ್ಕೆ ಅನುಮತಿಯನ್ನು ಪಡೆದು ; ದೀಕ್ಷೆ—ಜಿನ ದೀಕ್ಷೆ, ತಪೋ ನಿಯಮ ; ತಳೆದು—ಹೊಂದಿ ; ಉಜ್ಜ್ವಲಿಸಿ—ಕಳೆಯೇರಿ ; ಕರ್ಮ ಕ್ಷಯ—ಹಿಂದೆ ಮಾಡಿದ ಪಾಪಗಳ ನಾಶ ; ಮುಕ್ತಿ—ಈ ಪ್ರಪಂಚದಿಂದ ಬಿಡುಗಡೆ ; ನಿಲಿಸಿದನು—ತನ್ನಲ್ಲಿ ನಿಲ್ಲು ವಂತೆ ಮಾಡಿದನು (ಎಂದರೆ, ಮುಕ್ತಿಯನ್ನು ಪಡೆದನು).

೭೯. ವಿನಮತ್ ಅಮರೇಂದ್ರ—ದೇವೇಂದ್ರನಿಂದ ನಮಸ್ಕರಿಸಲ್ಪ ಡುವ; ಶ್ರೀ ಜಿನ ಪದ ಕಮಲ ಷಟ್ಚರಣ—ಜಿನನ ಪಾದ ಕಮಲದ ಲ್ಲಿಯ ತುಂಬಿಯಂತಿರುವವನು (ಎಂದರೆ, ಜಿನನಲ್ಲಿ ಭಕ್ತಿಯುಳ್ಳ ವನು) ; ವಾಣೀ ವದನ ದರ್ಪಣ—ಸರಸ್ವತಿಯ ಮುಖಕ್ಕೆ ಕನ್ನಡಿಯಂತಿರುವವನು (ಎಂದರೆ, ಪ್ರೌಢಿಮೆಯಲ್ಲಿ ಸರಸ್ವತಿಗೆ ಸಮಾನನಾದವನು); ಭೂಸುರೋತ್ತಮ—(ಜೈನ) ಬ್ರಾಹ್ಮಣ ಶ್ರೇಷ್ಠ ; ಚದುರ—ಚತುರ (ಸಂ.), ಕುಶಲನಾದವನು ; ಧರ್ಮ ಪ್ರದನ—ಧರ್ಮಿಷ್ಠನಾದ.

## ಆರನೆಯ ಸಂಧಿ

ಸೂ॥ ತುರು—ಹಸು ; ಮರಳಿಸು—ಹಿಂದಕ್ಕೆ ತಿರುಗಿಸು ; ಮುರಿ ಯಲ್ಕೆ—ಭಂಗ ಹೊಂದಲು, ವಿಫಲನಾಗಲು ; ಶಬರರನು—ಬೇಡರನ್ನು ; ಒರಸಿ—ನಾಶಗೊಳಿಸಿ ; ಕುಲ—ಸಮೂಹ.

೮೦. ತಾಯುಳಿದ—ತಾಯಿ ಬಿಟ್ಟು; ವಿಯೋಗ—ಅಗಲಿಕೆ ; ಅಂಭೋಧಿ—ಸಮುದ್ರ; ನಿರುಪಮಾತ್ಮ —ಪರಮಾತ್ಮ; ಆರ್ಯ ನಂದಿಯನು ಇರದೆ ; ಹೃತ್ಕಮಲ—ಕಮಲದಂತಿರುವ ಹೃದಯ ; ಅನವರತ —ಯಾವಾಗಲೂ.

೮೧. ಪರಮ ಪುರುಷರು—ಜ್ಞಾನಿಗಳು ; ರೂಪುದೋರಿಸಿ—ಕಾಣಿಸಿ ಕೊಂಡು ; ಸರಿವರು—ಹೊರಟುಹೋಗುವರು ; ಪರಿಣತಿ—ತಿಳಿವಳಿಕೆ ; ಉತ್ಸವ—ಸಂತೋಷ ; ತಾನೈನೂರ್ವರೊಂದಾಗಿರ್ದನು—ತಾನು ಐನೂರ್ವರೊಡನೆ ಒಟ್ಟಿಗಿದ್ದನು.

೮೨. ಸ್ಮರನನು—ಮನ್ಮಥನನ್ನು ; ವಾಣೀಶ್ವರ—(ಸರಸ್ವತೀ ಪತಿ), ಬ್ರಹ್ಮ ; ಸುರಪತಿ—ದೇವೇಂದ್ರ ; ಐಶ್ವರಿಯ—ಐಶ್ವರ್ಯ (ಸಂ.) ; ಗೀಷ್ಪತಿ—(ವಾಚಸ್ಪತಿ), ಬೃಹಸ್ಪತಿ ; ನಯ—ವಿನಯ ; ನೀತಿ—ಧರ್ಮಜ್ಞತೆ ; ಧನಪತಿ—ಕುಬೇರ ; ಚಕ್ರಿ —(ಚಕ್ರಾಯುಧವುಳ್ಳ) ವಿಷ್ಣು ; ಉಪಾಯ—ಕೆಲಸವನ್ನು ಕೈಗೂಡಿಸಿಕೊಳ್ಳುವ ದಕ್ಷತೆ ; ಉತ್ಕರ—ಸಮೂಹ ; ಊರ್ಜಿತ —ಅತಿಶಯವಾದ ; ತೇಜ—ಕಾಂತಿ ; ಭಾಸ್ಕರ—ಸೂರ್ಯ ; ಪೋಲ್ತು—ಹೋಲಿದವನಾಗಿ.

೮೩. ವಿನುತ—ಸ್ತೋತ್ರಾರ್ಹವಾದ ; ಕುಮುದಾಂಬಕ—ನೈದಿಲೆಯಂತಿರುವ ಕಣ್ಣು ; ಗಭೀರ—ಗಂಭೀರವಾದ ; ಲಸತ್ —ಪ್ರಕಾಶಮಾನವಾದ ; ಬಿಂಬೋಷ್ಠ—ತೊಂಡೆಯ ಹಣ್ಣಿನಂತೆ ಕೆಂಪಗಿರುವ ತುಟಿ ; ಆನನ—ಮುಖ ; ವಿಶಾಲಿತ—ಅಗಲವಾದ, ವಕ್ಷ—ಎದೆ ; ಶ್ಮಶ್ರು—ಮೀಸೆ ; ತನು ಮಧ್ಯ—ಸೂಕ್ಷ್ಮವಾದ ನಡು ; ವನರುಹಾಂಘ್ರಿ—ಕಮಲದಂತಿರುವ ಪಾದಗಳು; ದೀರ್ಘ—ಉದ್ದವಾದ; ರಕ್ತ ನಖ —ಕೆಂಪಗಿರುವ ಉಗುರು ; ತುಂಗ ಘ್ರಾಣ—ನಿಡಿದಾದ ಮೂಗು ; ತನು—ದೇಹ ; ಘನತರ ಉತ್ಕಚ ಪೂರ್ಣ ಭಾಳ—ಹೆಚ್ಚಾದ ಮುಂಗುರುಳಿನಿಂದ ಕೂಡಿರುವ ಹಣೆ ; ಉತ್ಕಚ—ನೆಟ್ಟಗಿರುವ ಕೂದಲು.

೮೪ ಮೂರ್ಖರ ಮೌಳಿ—ಮೂರ್ಖರಲ್ಲಿ ಅಗ್ರಗಣ್ಯನು ; ಒಡ್ಡೋಲಗಂ ಗೊಟ್ಟು—ಸಭೆಗೂಡಿ, ದರ್ಬಾರು ಮಾಡುತ್ತ ; ನಿರ್ದ್ರವದ—ಒಣಗಿಹೋದ ; ತಾಳಿ—ಗಂಟಲು ; ಕೈ ಮೊರೆ—ಕೈಯೆತ್ತಿ ವ್ಯಥೆಯನ್ನು ಹೇಳಿಕೊಳ್ಳುವಿಕೆ ; ಕಲ್ಲಿ—ಹುರಿಯಿಂದ ಹೆಣೆದು ಮಾಡಿದ ಬಲೆಯಂತಿರುವ ಸಾಧನ ; ಜೋಳಿ—ಜೋಳಿಗೆ ; ಗೋಪಾಲಕ—ದನ ಕಾಯುವವ ; ಎರಗಿ—ನಮಸ್ಕರಿಸಿ.

೮೫. ಚಿತ್ತ್ಕೈಸು—ಮನಸ್ಸಿಗೆ ತೆಗೆದುಕೊ ; ಭರ—ಅತಿಶಯ ; ಕಿರಾತರು—ಬೇಡರು; ಹಟ್ಟಿಗಳ—ದನಗಳನ್ನು ಕಟ್ಟಿ ಹಾಕುವ ಸ್ಥಳಗಳಿಗೆ; ಐತಂದು—ಬಂದು; ಇರಿದು—ತಿವಿದು, ಹೊಡೆದು, ಕೊಂದು.

೮೬. ಸಿಡಿಮಿಡಿಗೆಯ್ಯುತ—ಹಾರಿಹಾರಿ ಬೀಳುತ್ತ ; ನೃಪಾಲನು ಓಲಗವನು (ಸಭೆಯನ್ನು) ವಿಸರ್ಜಿಸಿ (ಕಳುಹಿಸಿಬಿಟ್ಟು) ; ಕಾಲ ಭೈರವ—ಪ್ರಳಯ ಕಾಲದ ರುದ್ರ ; ಶಬರ ಸಂಕುಲ—ಬೇಡರ ಗುಂಪು ; ನಾಲಗೆಯನು ಹೆಡದಲೆಯಿಂದಲಿ (ತಲೆಯ ಹಿಂಭಾಗದಿಂದ); ಉಗಿವೆನು— ಕಿತ್ತು ಹಾಕುವೆನು; ಆಹವ—ಯುದ್ಧ ; ಅನುವಾಗು—ಸಿದ್ಧವಾಗು.

೮೭. ನೊರಜು— ಸೊಳ್ಳೆ ; ಕೈದು—ಆಯುಧ ; ಹುಲು—( ಹುಲ್ಲಿಗೆ ಸಮಾನವಾದ), ಶಕ್ತಿಯಿಲ್ಲದ ; ಬಹುದಕೆ—ಬರುವುದಕ್ಕೆ ; ನೀವು ಪರಿಯಂತೇಕೆ—ನಿಮ್ಮ ವರೆಗೂ ಏಕೆ ? ನೆರಹು—ಸೇರಿಸು; ಒರಸಿ—ನಾಶಗೊಳಿಸಿ.

೮೮. ಮತವಹುದು—ಒಪ್ಪಿದೆನು ; ಅನುನಯದಿ—ಯೋಗ್ಯ ರೀತಿಯಲ್ಲಿ ; ನೆರೆ ಕೂಡಿ—ಸೇರಿಸಿ ; ಅಟ್ಟಲು—ಕಳುಹಿಸಲು ; ಪುಳಿಂದ—ಬೇಡ ; ಕನಲಿ—ರೇಗಿ ; ದನು — ಧನುಸ್ (ಸಂ.), ಬಿಲ್ಲು ; ಸರ—ಶರ (ಸಂ.), ಬಾಣ ; ಫಡ—ಕೋಪದಿಂದಾಡುವ ಅಲಕ್ಷ್ಯದ ಮಾತು ; ತಾಗು—ಮೇರೆ ಬೀಳು.

೮೯. ರಿಪು ಸೇನೆ—ಶತ್ರು ಸೈನ್ಯ ; ನಿಷ್ಠುರ—ಕಠೋರ, ಕಾಠಿನ್ಯ ; ಬೆರಸಿ—ಎದುರಿಸಿ ; ಬೊಬ್ಬಿರಿದು—ಗರ್ಜಿಸಿ ; ಕರೆ—ಸುರಿಸು ; ತರಹರಿಸಲು—ತಡೆದುಕೊಳ್ಳಲು ; ಅಳವಡದೆ—ಶಕ್ತಿಯಿಲ್ಲದೆ ; ಮುರಿದು—ಭಂಗಹೊಂದಿ ; ಮಗುಳ್ದು—ಹಿಂದಿರುಗಿ ; ಕಾತರಿಸಿ—ಭಯಪಟ್ಟು ; ಹೊರವಟ್ಟ—ಹೊರವಂಟ, ಹೊರಟನು.

೯೦. ತಳಿತ—ವಿಸ್ತರಿಸಿದ ; ಪಲ್ಲವ ಸತ್ತಿಗೆ—ಚಿಗುರಿನ ಕೊಡೆ ; ಸತ್ತಿಗೆ (ದ್ಭ), ಛತ್ರಿಕಾ (ಸಂ.); ಹೊಂಬಳಯಿಗೆ (ಹೊನ್ನಿನ ಪಳಯಿಗೆ), ಚಿನ್ನದ ಬಾವುಟ ; ಸೀಗುರಿ—ಸಣ್ಣ ಚಾಮರ ; ಲಗ್ಗೆ—ಲಗ್ನ (ಸಂ.), ಅನೇಕ ವಾದ್ಯಗಳ ಶಬ್ದದ ಸೇರುವಿಕೆ ; ಅಳ್ಳಿರಿವ—ಬಾರಿಸುವ ; ರಭಸ—ಆಧಿಕ್ಯ ; ಒಲವು—ಸಂಭ್ರಮ ; ಚಾತುರ್ಬಲ—ಆನೆ, ಕುದುರೆ, ರಥ, ಕಾಲಾಳು; ಅಳವಿಯುಲಿ—ಯುದ್ಧ ಪರಾಕ್ರಮದಿಂದ

೯೧. ಶರಧಿ—ಸಮುದ್ರ ; ಬಲ—ಸೈನ್ಯ ; ತಲೆಯೆತ್ತಿ—ಪರಾಕ್ರಮದಿಂದ ; ರಾಯ ದಳ— ದೊರೆಯ ಸೈನ್ಯ ; ಓಸರಿ—ಹಿಂದೆ ಬೀಳು ; ಕೆರಳಿ—ಕೋಪಗೊಂಡು ; ತಾ—ತಾನು ; ಮೇಲೆ ಉರವಣಿಸಿ—ಪ್ರತಾಪದಿಂದ ಮೇಲೆ ಬಿದ್ದು ; ಕೈಮಾಡಲು—ಶಕ್ತಿ ತೋರಿಸಲು ; ವನ ಚರರು—(ಕಾಡಿನಲ್ಲಿ ಸಂಚರಿಸುವವರು), ಬೇಡರು ; ಮುರಿದು—ಭಂಗಪಟ್ಟು.

೯೨. ಭೀಳ—ಭಯಂಕರವಾದ; ದಾವಾಗ್ನಿ—ಕಾಡು ಕಿಚ್ಚು; ಧೂಮ—ಹೊಗೆ ; ಆಳಿ—ಸಮೂಹ ; ಘೋರ—ಭಯಂಕರವಾದ ; ಅಂಧಕಾರ—ಕತ್ತಲೆ ; ಕಾಳ—(ಕತ್ತಲೆಯಿಂದ) ಕಪ್ಪಾದ ; ಕಾರ್ಮುಗಿಲು—ವರ್ಷಾಕಾಲದ ಮೇಘ ; ಕಾಳಾಹಿ—ಕೃಷ್ಣ (ಕಪ್ಪಾದ) ಸರ್ಪ ; ಸಂಕುಳ—ಸಮೂಹ ; ನೀಳ—ಕಪ್ಪಾದ ; ಮಧುಪ—ತುಂಬಿ ; ಕುಲ—ಸಮೂಹ ; ತಮಾಳ ವನ—ಹೊಂಗೆಯ ಮರಗಳ ಕಾಡು ; ಖಳರು—ನೀಚರಾದ (ಬೇಡರು) ; ಛಡಾಳಿಸುತ—ಅತಿಶಯವಾಗಿ; ಮೇಲೇರು—ಮೇಲೆ ಬೀಳು.

೯೩. ಲುಬ್ಧಕರು—ಬೇಡರು; ಒಡನೆ—ಕೂಡಲೆ; ಸಂಗಡಿಸಿಕೊಂಡು—ಒಟ್ಟಾಗಿ; ಅವಗಡಿಸಿ—ತ್ವರಿತದಿಂದ; ಒಗ್ಗಿನಲಿ—ಒಟ್ಟಿಗೆ; ಮಡ—ಪಾದದ ಹಿಂಭಾಗ; ಮಡ ಮುರಿ—ಹಿಂದಿರುಗು; ಒಗ್ಗು ಒಡೆದು—ಚದರಿಹೋಗಿ; ಬಸಿವ—ಸುರಿಯುತ್ತಿರುವ.

೯೪. ಪರಿಭವ—ಸೋಲುವಿಕೆ; ನೊರಜು—ನೊಳ್ಳೆ; ಅನುವುದೆ—ಹೊರಲಾಪುದೆ? ತಾಳ್ದ—(ಧರಿಸಿದ), ಪಾಲಿಸುತ್ತಿದ್ದ; ಇರದೆ—ಸುಮ್ಮನಿರದೆ; ತಮತಮಗೆ—ತಂತಮ್ಮಲ್ಲಿಯೇ; ಬೆಂಬೀಳು—(ಬೆನ್ನ ಬೀಳು), ಹಿಂದೆ ಹೋಗು.

೯೫. ಅಧೀಶ್ವರ—ಒಡೆಯ; ಅಪರ—ಬೇರೆ, ಮತ್ತೊಬ್ಬ; ನಂದಗೋಪ—ಶ್ರೀ ಕೃಷ್ಣನ ಸಾಕುತಂದೆಯಾದ ಗೋಪತಿ; ತುರುವ—ಹಸುಗಳನ್ನು; ಮರಳಿಸು (ಬೇಡರ ಕಡೆಯಿಂದ) ಹಿಂದಿರುಗಿಸು; ಹೇಮದ ಪುತ್ತಳಿಗಳು—ಚಿನ್ನದ ಬೊಂಬೆಗಳು; ಬೆರಸಿ—ಒಡನೆ, ಕೂಡ; ಆತ್ಮಜೆ—ಮಗಳು; ಎಯ್ದು—ಹೊರಟು; ಒಲಿದು—ಮನಸ್ಸಿಟ್ಟು; ಪುರಾಂತದಲಿ—ಪಟ್ಟಣದೊಳಗೆ; ಸಾರಿಸಿದನು—ಡಂಗುರ ಹೊಯ್ಸಿದನು.

೯೬. ವೈಶ್ಯೇಂದ್ರ—ವೈಶ್ಯಶ್ರೇಷ್ಠನಾದ ಅಪರ ನಂದಗೋಪನು; ತನುಜೆ—ಮಗಳು; ವಿಸ್ತರದೊಳು—(ಅತಿಶಯವಾಗಿ), ಸಂಭ್ರಮದಿಂದ; ಎನುತ್ತಲು ಅಂದು ಆ ಪುರದೆ; ಕಾಷ್ಠಾಂಗಾರ ಸಹಿತವೆ—ಕಾಷ್ಠಾಂಗಾರನು ಕೂಡ; ಮುರಿದು—ಸೋತು; ಬಾಹಾಸ್ಫುರಣ—(ತೋಳಿನ) ಶಕ್ತಿಯ; ಅಳವು—ಪ್ರಮಾಣ; ಎನಿತು—ಎಷ್ಟರದು? (ಎಂದರೆ, ನಮಗೆ ಅಷ್ಟು ಶಕ್ತಿಯಿಲ್ಲ): ಪುರ ಸ್ತೋಮ—ಪುರಜನರ ಗುಂಪು.

೯೭. ಕರಿ—ಆನೆ; ರತ್ನಾಭರಣವು ಐಶ್ವರಿಯ; ಸತಿ—ಹೆಂಡತಿ; ಅಂತರಿಸೆ—ಕಳೆದುಹೋದರೆ; ಮಗುಳೆ—ಮರಳಿ; ಇವ—ಇವನ್ನು; ರೂಢಿಸ ಬಾರದು—ಪಡೆಯಲು ಆಗುವುದಿಲ್ಲ; ತರುಣಿ—ಯೌವನ ಸ್ತ್ರೀ; ಮೇಲಹ—ಮುಂದೆ ಬರುವ.

೯೮. ಪೆಂಪು—(ಉನ್ನತಿ), ಉತ್ಸಾಹ; ಒರ್ವರು—ಒಬ್ಬರೂ; ಪೊರಪೊಣ್ಮು—ಹೊರಗೆ ಹೊರಡು; ಜಯಂತ—ಇಂದ್ರನ ಮಗ; ನಿಭ—ಸಮಾನವಾದ; ಸಂತತಿ—ಸಮೂಹ; ತಂದು ಆ ಕಂತೆಯನು; ಪದ್ಮಾಸ್ಯ—ಜೀವಂಧರನ ಸಹೋದರರಲ್ಲೊಬ್ಬನ ಹೆಸರು; ಅರಸಿ—(ರಾಣಿ),ಹೆಂಡತಿ.

೯೯. ಯತೀಂದ್ರ—ಶ್ರೇಷ್ಠನಾದ ಸಂನ್ಯಾಸಿ; ವಿಬುಧ—ವಿದ್ವಾಂಸ; ಆಪದ—ಆಪತ್ತು; ಅಬಲಾ ಜನ—ಹೆಂಗುಸರು; ಕಂಡು ಅದನು; ಹೀನಪು—ನೀಚತನ; ಆತ್ಮದಲಿ—ತನ್ನಲ್ಲಿ ತಾನೆ.

೧೦೦ ಅಭಯವಿತ್ತು—ಧೈರ್ಯ ಹೇಳಿ; ಕೈದು—ಆಯುಧ; ಸುರೇಂದ್ರ ಸನ್ನಿಭ—ಇಂದ್ರನಿಗೆಣೆಯಾದ ಜೀವಂಧರನು; ರಥವ ಏರಿ; ಹಿಂದೆ—ಅವನ ಹಿಂದೆ; ಒಗ್ಗಿನಲಿ—ಒಟ್ಟಾಗಿ.

೧೦೧. ಲಗ್ಗೆವರೆಗಳಲಿ—ಶಬ್ದ ಮಾಡುವ ಅನೇಕ (ಪರೆ) ವಾದ್ಯಗಳೊಡನೆ; ಒಗ್ಗು ಕವಿದು—ಒಟ್ಟಾಗಿ ಮುತ್ತಿ; ಚಯ—ಸಮೂಹ; ನುಗ್ಗು ನುಸಿಯಾಗಿ—ಚೂರುಚೂರಾಗಿ; ಅರೆದು—(ಚೂರ್ಣ ಮಾಡಿ), ಕೊಂದು; ನೊಗ್ಗು—(ನೊಳ್ಗು), ಬಗ್ಗುವಿಕೆ, ಸೋಲುವಿಕೆ; ಉಗ್ಗಡ—ಉತ್ಕಟ (ಸಂ.), ಅತಿಶಯ; ಕೂರಂಬು—ಹರಿತವಾದ ಬಾಣ; ಅಗ್ಗಳೆಯರು—ಪರಾಕ್ರಮಿಗಳು; ಇಟ್ಟಣಿಸಿ—ಗುಂಪುಕೂಡಿ.

೧೦೨. ಸರಲ ವೃಷ್ಟಿ—ಬಾಣದ ಮಳೆ; ಎಡೆಯಲಿ—ಮಾರ್ಗದಲ್ಲಿಯೇ; ನಿಶಿತ—ಹರಿತವಾದ; ಹೊಕ್ಕು—(ಶತ್ರು ಸೈನ್ಯದೊಳಗೆ) ನುಗ್ಗಿ; ಗೋಸಂಕುಲ(ಸಮೂಹ)ವ ಒಡವೆರಸಿ (ಕೂಡಿಕೊಂಡು); ಅಂತರ—ಕಾಲ; ಆಜಿ ರಂಗ—ಯುದ್ಧ ಪ್ರದೇಶ.

೧೦೩. ಗೋವರ—(ಗೋವಳ, ಗೋಪಾಲ, ಸಂ.), ದನಕಾಯುವವ; ಅವರವರ ನಾಮ—ಆ ಹಸುಗಳಿಗೆ ಇಟ್ಟಿದ್ದ ಹೆಸರು; ಹಟ್ಟಿ—ಕೊಟ್ಟಿಗೆ; ಹುಗಿಸೆ—ಹೋಗುವಂತೆ ಮಾಡಲು.

೧೦೪. ಅವನಿಯನು—ನೆಲವನ್ನು ; ಅಣೆದು—ಹೊಡೆದು ; ಕೋಡಲಿ—ಕೊಂಬಿನಿಂದ ; ಶೈಲ—ಕಲ್ಲು ಬಂಡೆ; ಒಡೆ ಮಗುಚಿ—ಒಡೆದುಹೋಗುವಂತೆ ತಿರುವಿಹಾಕಿ ; ದೆಸೆ—ದಿಕ್ಕು ; ಮೂಲೆ ಬಿಡೆ—ಮೂಲೆಗಳು ಬಿಟ್ಟುಹೋಗುವಂತೆ ; ಮಾರ್ದನಿಗೆ (ತಮ್ಮ) ಪ್ರತಿಧ್ವನಿಗೆ ; ಅಗಿದು—ಭಯಪಟ್ಟು ; ನಂದಿನಿ—ಹಸು ; ಅಡರಿ—ಹತ್ತಿ ; ನೆಗಹಿ—ಮೇಲಕ್ಕೆತ್ತಿ ; ಧಡಾಳಿಸುತಲು—ಆತುರದಿಂದ ನುಗ್ಗುತ್ತ ; ಅಪ್ಪಳಿಸಿ—ಮೇಲೆಗುರಿ ; ಮಲೆಯುತ—ಕೊಬ್ಬಿನಿಂದ ಮೆರೆಯುತ್ತ ; ಗೂಳಿ—ಹೋರಿ ; ಈಕ್ಷಿಸಿದ—ನೋಡಿದನು.

೧೦೫. ಜೀವಂಧರನ—ಜೀವಂಧರನನ್ನು ; ಅಂದು—ಆಗ ; ಮದೀಯ—ನನ್ನ ; ಅಗ್ರಣಿ—ಶ್ರೇಷ್ಠ.

೧೦೬. ವಣಿಗ್ವರ—ವೈಶ್ಯಶ್ರೇಷ್ಠನೇ ! ಕಾಮಿನಿಯನು—(ಸ್ತ್ರೀಯನ್ನು), ನಿನ್ನ ಮಗಳನ್ನು ; ಮತ್ಸಹಜಾತ (ನನ್ನ ಒಡಹುಟ್ಟಿದವ)ಗೆ ಆ ಸಲ್ಲಲಿತ (ಮನೋಹರವಾದ) ಗುಣ(ವುಳ್ಳವನಾದ) ಪದ್ಮಾಸ್ಯಂಗೆ ಒಲಿದು ಈ (ಕೊಡು) ; ನಯೋಕ್ತಿ—ವಿನಯವಾದ ಮಾತು ; ನಲವಿಂದ—ಸಂತೋಷದಿಂದ ; ಅಗ್ನಿಸಾಕ್ಷಿಕದಲಿ—ಅಗ್ನಿಯ ಎದುರಿಗೆ (ಎಂದರೆ, ಹೋಮ ಮೊದಲಾದುವನ್ನು ಮಾಡಿಸಿ).

೧೦೭. ಗೋಗ್ರಹಣ—ಹಸುಗಳನ್ನು ಹಿಡಿಯುವಿಕೆ ; ಪ್ರಶಸ್ತಿ—(ಸ್ತುತಿ), ವಿಚಾರ. (೭೯ನೆಯ ಪದ್ಯದ ಟಿಪ್ಪಣಿಯನ್ನು ನೋಡಿರಿ)

## ಏಳನೆಯ ಸಂಧಿ

ಸೂ|| ಸೊಯಂಬರ—ಸ್ವಯಂವರ (ಸಂ.), ರಾಜಕನ್ಯೆಯು ತನಗೆ ಗಂಡನನ್ನು, ಸಭೆಯಲ್ಲಿ ನೆರೆದ ರಾಜಪುತ್ರರಲ್ಲಿ, ತಾನಾಗಿ ಆರಿಸುವುದು ; ಸಕಲರಸು—ಸಕಲ+ಅರಸು (ಇಲ್ಲಿ ಒಂದು

ಸಂಸ್ಕೃತಪದವೂ ಒಂದು ಕನ್ನಡಪದವೂ ಸೇರಿ ಸಮಾಸವಾಗಿದೆ. ಇದಕ್ಕೆ 'ಅರಿಸಮಾಸ' ವೆಂದು ಹೆಸರು. ಇದು ತಪ್ಪು); ವಾಣಿಜ ವರ—ವೈಶ್ಯಶ್ರೇಷ್ಠ; ಸಾರಿಸಿ-(ಡಂಗುರ ಹೊಯ್ಸಿ), ಪ್ರಸಿದ್ಧಪಡಿಸಿ; ರಚಿಸಿ—ಏರ್ಪಡಿಸಿ; ನೆರಹಿದನು—ಕೂಡಿಸಿದನು.

೧೦೮. ಶ್ರೀದತ್ತ—(ಹೆಸರು); ವಿಭವ—ಐಶ್ವರ್ಯ; ಹರನ ಸಖಗೆ—(ಶಿವನ ಸ್ನೇಹಿತನಾದ) ಕುಬೇರನಿಗೆ; ತಜ್ಜಾತಿ ಪ್ರವರ್ತನೆಯು—ಆ ವೈಶ್ಯಜಾತಿಯ ನಡೆವಳಿಯನ್ನು; ಮೆರೆದು—ನಡೆದು ತೋರ್ಪಡಿಸಿ; ವಿಸ್ತರದೊಳು—ವಿಶೇಷವಾಗಿ; ತನ್ನಯ ಮನದಿ ಚಿಂತಿಸಿದ; ಆಯ ವಿಹೀನದ ವ್ಯಯ—ಲಾಭವಿಲ್ಲದ ವೆಚ್ಚ.

೧೦೯. ಅವನಿ—ಭೂಮಿ; ಉಂಬುವ—(ಉಣ್ಣುವವನು), ಅನುಭವಿಸುವವನು; ಮಹೋತ್ತಮ—ಅತ್ಯಂತ ಉತ್ತಮನು; ತಾಯ ಒಡವೆಯ (ಧನವ) ಉಂಡು ಇಹನು ತಾನು ಅಧಮ; ಯುವತಿ—(ಪ್ರಾಯದ ಸ್ತ್ರೀ), ಹೆಂಡಿತಿ; ಅರ್ಥ—ಧನ; ಒಂದಿ—(ಕೂಡಿ), ಉಪಯೋಗಿಸಿಕೊಂಡು.

೧೧೦. (ದರಿದ್ರನಾದವನನ್ನು), ತನಯರುಗಳು— ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು; ದಟ್ಟಿಸು—ಬಯ್ಯು; ಅಂಗನೆಯರು—(ಸ್ತ್ರೀಯರು), ಹೆಂಡಿರು; ಉಲ್ಲಂಘಿಸು—ಅಲಕ್ಷ್ಯಮಾಡು; ಇಷ್ಟರು—ಮಿತ್ರರು; ಮುನಿವರು—ಕೋಪಿಸಿಕೊಳ್ಳುವರು; ತಸ್ಕರ—ಕಳ್ಳ; ಲೋಕ ಜನ; ಅನುಪಮ—ಅಸಾಧಾರಣವಾದ; ಆಸ್ಥಾನ—ದೊರೆಯ ಓಲಗ (ಸಭೆ); ಅಶೋಭಿತನು—(ಕಾಂತಿಹೀನನು), ಅಪ್ರಸಿದ್ಧನು; ದರಿದ್ರನಿಂದ—ದರಿದ್ರನಿಗಿಂತ; ಕಷ್ಟರು—ಕಷ್ಟಕ್ಕೊಳಗಾದವರು.

೧೧೧. ಪುರುಷ—ಮನುಷ್ಯನು; ದೊರೆಕೊಳಲು—ಕೈಗೂಡಿದರೆ; ಸರ್ವಜ್ಞನು—ಎಲ್ಲವನ್ನೂ ತಿಳಿದವನು (ಎನ್ನುವರು); ಅವ

(ನು); ಸುಸ್ಥಿರ—ಒಳ್ಳೆಯ ದೃಢ ಮನಸ್ಸುಳ್ಳವನು ; ಸುಭಗ—ಸೊಬಗು(ಧ್ವ.), ಪುಣ್ಯವಂತ ; ಶೀಲ—ನಡತೆ ; ಸತ್ಯಾಚಾರ—ಕೃತ್ರಿಮವಿಲ್ಲದ ನಡೆವಳಿ ; ಅವನು ; ಅಪ್ರೌಢನು ಮೂಢನು ; ಜನ ಬಾಹಿರನು–(ಯೋಗ್ಯ)ಜನರಲ್ಲಿ ಸೇರಲು ಅರ್ಹನಲ್ಲದವನು ; ದಾರಿದ್ರ್ಯದಿಂದ—ದರಿದ್ರಕ್ಕಿಂತಲೂ.

೧೧೨. ಉಪಾರ್ಜಿಸಲು ಬೇಕು—ಗಳಿಸಬೇಕು ; ಅಪೂರ್ವದ ವಸ್ತುವನು—ಅಸಾಮಾನ್ಯವಾದ ಪದಾರ್ಥಗಳನ್ನು ; ಹಡಗಲ—ಹಡಗಿನಲ್ಲಿ ; ಅಬ್ಧಿ—ಸಮುದ್ರ ; ವಿಮಳ—(ಪರಿಶುದ್ಧವಾದ), ಯೋಗ್ಯರಿರುವ; ಲಾಭದೊಳ್ಕೊಂಡಿ—ಲಾಭವನ್ನು ಸಂಪಾದಿಸಿ; ಮಗುಳೆ—ಹಿಂದಿರುಗಿ ; ಸರಾಗದಲಿ—ಸಂತೋಷದಿಂದ

೧೧೩. ಜಡಧಿ—(ಜಲಧಿ), ಸಮುದ್ರ; ಒಡೆದ ತೆರದಿಂ—ಒಡೆದ ಹಾಗೆ ತೋರುವಂತೆ ; ನೀರು ಒಳಗೆ ಬಂದು ಇಡಿಯುತಿರೆ (ತುಂಬುತ್ತಿರುವಲ್ಲಿ) ; ಕಂಗೆಡೆ—ಅಧೈರ್ಯಹೊಂದಲು ; ಹಡಗು ಓಗುರ್ಡಿಸದು (ಓರೆಯಾಗಿ ಮುಳುಗಿಹೋಗದು) ; ಅದರಿಂ ಮುನ್ನ (ಅದಕ್ಕೆ ಮೊದಲೇ) ಅಕಟಾ ! ನೀವು ನಡುಗುವರೆ ? ಎಂದು ನಯದಿಂದ ಒಡಂಬಡಿಸಿ ಒಲವಿನಲಿ ತಿಳುಹುತಿರ್ದನು.

೧೧೪. ಇರದೆ—ತೇಲಿರದೆ ; ಮುರಿದ—(ಹಡಗಿನಿಂದ) ಮುರಿದು ಬಿದ್ದಿದ್ದ ; ಕೂಪಸ್ತಂಭ—ಹಡಗಿನ ಮಧ್ಯದಲ್ಲಿರುವ ದೊಡ್ಡ ಧ್ವಜಸ್ತಂಭ ; ಸಾರಿ—ಸೇರಿ ; (ತೇಲುತ್ತಿದ್ದ ಧ್ವಜಸ್ತಂಭದ ಆಶ್ರಯವನ್ನು ಪಡೆದು); ದ್ವೀಪಾಂತರ—ಬೇರೊಂದು ದ್ವೀಪ; ನರನದೊರ್ವನು—ಯಾವನೋ ಒಬ್ಬ ಮನುಷ್ಯನು ; ಬಂದು ಇರಲು, ತಾ ಕಂಗೆಟ್ಟು ನುಡಿದ.

೧೧೫ ತೆರನನು—ಸ್ಥಿತಿಯನ್ನು ; ಮಾತಾಡಿಸುತಲಿ ; 'ವಿಜಯಾರ್ಧಗಿರಿ' ಯೆಂಬ ಪರ್ವತ ; ಠಾವು—ತಾವು, ಸ್ಥಳ.

೧೧೬. ಪ್ರಣುತ—ಪ್ರಸಿದ್ಧವಾದ ; ಗಾಂಧಾರ (ವೆಂಬ) ವಿಷಯ (ದೇಶದ) ಅಂಗಣ (ಪ್ರದೇಶ); ನಿತ್ಯಾಲೋಕ (ಎಂಬ)

ಪುರ ; ಗರುಡವೇಗ ಆಖ್ಯ (ಹೆಸರಿನ) ನೃಪ, ಧಾರಿಣಿ (ಎಂಬ) ಸತಿ ಸಹಿತಲಿ; ಧರಿತ್ರಿಯೊಳು ಆ ನೃಪಗೆ ಆರು ಎಣೆ ?

೧೧೭. ಉರ್ವರೆ—ಭೂಮಿ ; ಅನುನಯ—ಪ್ರೇಮ; ಲಸತ್—ಕಾಂತಿ ಯುತಳಾದ ; ವಿಲೋಲ—(ಚಲಿಸುತ್ತಿರುವ), ಮೆರೆಯು ತ್ತಿರುವ ; ಪಾರ್ವರು—ಬ್ರಾಹ್ಮಣರು ; ಕೋಮಲೆಯು ನೀನು ಒರ್ವಗೆ ಈಯುದೊಡೆ ಪಳಿವು (ನಿಂದೆ) ಅಕ್ಕು.

೧೧೮. ರಾಜಪುರಿ—ಕಾಷ್ಠಾಂಗಾರನ ರಾಜಧಾನಿ; ಒಲಿಸಿದಾತನು—ಮೆಚ್ಚಿಸಿದವನು ; ಪುರುಷನು—ಗಂಡನು ; ಎನೆ—ಎಂದು ; ಮೌಹೂರ್ತಿಕರು—ಜ್ಯೋತಿಷ್ಕರು ; ಬೆಸಸಿರಲು—ನಿರೂಪಿಸಿ ರುವಲ್ಲಿ ; ತಾನು ಅದು ಆವ ಪರಿಯೊಳು ಘಟಿಸುವುದು (ಅನು ಕೂಲಿಸುವುದು) ; ಹೋಹುದು—ಹೋಗುವುದು ; ಅಘು ಅಲ್ಲವು (ಆಗುವುದಿಲ್ಲ) ಎಂದು ; ಎದೆ ಜರಿದು—ಮನಗುಂದಿ.

೧೧೯. ರಾಜರಾಜ ಸಭಾಜನು—ಕುಬೇರನ ಸ್ನೇಹಿತನು (ಎಂದರೆ, ಬಹಳ ಐಶ್ವರ್ಯವಂತನು) ; ಆ ಶ್ರೀದತ್ತ (ನು) ನೆರೆ ವಿಭ್ರಾಜಿಸು ತ್ತಿಹನು (ಪ್ರಸಿದ್ಧನಾಗಿರುವನು) ; ಆತನನು ವಣಿಗ್ವರ ರಾಜನನು ತೇಜಮನ್ನಣೆಯಿಂ ನಾಂ ಕರೆಸಿ ; ತೇಜ—(ಪ್ರಕಾಶಮಾನವಾದ), ಅತಿಶಯವಾದ ; ತನೂಜೆ—ಮಗಳು ; ಕೈಗೊಟ್ಟೊಡೆ—ಒಪ್ಪಿಸಿದರೆ.

೧೨೦. ಅರಸಿ ಸಹಿತ—ಅರಸಿಯೊಡನೆ ; ಅಬ್ಧಿಯೊಳು ನೀ ಬರಲು ಹಡಗು ಒಡೆದಂತೆ ವಿದ್ಯೋತ್ಕರದಿ (ಇಂದ್ರಜಾಲ ವಿದ್ಯೆಗಳಿಂದ) ಮಾಡಿದೆ ಅರಸಿನ ಆಜ್ಞೆಯೊಳು ನಾನು ನಿನ್ನನು ಇಲ್ಲಿಗೆ ತಂದೆ ಎಂದ ; ಉತ್ಕರ—ಸಮೂಹ.

೧೨೧. ಹಡಗು ಒಡೆದುದಿಲ್ಲ (ಒಡೆಯಲಿಲ್ಲ) ಒಡವೆ ಸಹಿತ ಈ ತಡಿ ಯೊಳು (ದಡದಲ್ಲಿ) ಇದೆ ; ಚರ—ಅರಸಾಳು ; ನಡೆಯೆನು ತಲು—ನಡೆಯೆನ್ನುತ್ತಲೆ; ಅವನೊಡನೆ ಬಂದು ಆ ಭೂಮಿಪಾಲ ಕನ ಅಡಿಗೆ ಎರಗಲು ; ಸಖ—ಸ್ನೇಹಿತ.

೧೨೨. ಸತ್ಕರಿಸಿ—ಉಪಚರಿಸಿ ; ತನುಜೆಯು—(ತನ್ನ) ಮಗಳನ್ನು ; ಕೈಯೊಳಿತ್ತು—ಅವನ ಕೈಗೊಪ್ಪಿಸಿ ; ಮತ್ಸುತೆಗೆ—ನನ್ನ ಮಗಳಿಗೆ ; ಪುರುಷ ರತ್ನವನು—ಶ್ರೇಷ್ಠನಾದ ಗಂಡನನ್ನು ; ಆ ಪುರದೊಳು—ರಾಜಪುರದಲ್ಲಿ; ಅನುಕರಿಸು—ಹೊಂದಿಸು; ವೃತ್ತಾಂತರ—ಎಲ್ಲ ಸಮಾಚಾರ ; ಅತಿಶಯದಿ—ಪ್ರೀತಿಯಿಂದ.

೧೨೩. ಮೇಳದ ತರುಣಿಯರು—ಚೇಟಿಯರು, ದಾಸಿಯರು ; ವರವಣಿಗ್ವರನು ಈತನು ನಿನ್ನ ಪಿತ (ತಂದೆ) ಎಂದು ; ಅಪೂರ್ವದ ವಸ್ತುಗಳನು.

೧೨೪. ಬೀಳುಕೊಂಡು—ಬೀಳ್ಕೊಂಡು, ಅಪ್ಪಣೆಪಡೆದು ; ಆ ಪರದನು—ಆ ವರ್ತಕನು ; ಸುಕುಮಾರಿ ಸಹಿತ—ಆ ಕೋಮಲೆಯೊಡನೆ ; ಅಂಗನೆ—(ಸ್ತ್ರೀ), ತನ್ನ ಹೆಂಡಿತಿ ; ಉರು—ಅತಿಶಯವಾದ ; ಎಸೆವ—ಪ್ರಶಸ್ತವಾದ ; ಧರಣಿಯಮರ—ಬ್ರಾಹ್ಮಣ ; ಲೀಲೆಯಲಿ—ಸಂತೋಷದಿಂದ.

೧೨೫. ವಾಣಿಜ ವರ—ವರ್ತಕಶ್ರೇಷ್ಠನು ; ಸಂಕುಳ—ಸಮೂಹ ; ಪಾವುಡ—ಪ್ರಾಭೃತ (ಸಂ), ಬಹುಮಾನ ; ಪಾವುಡೆಗಳನೆಸಗಿ—ಉಡುಗೊರೆ ಕೊಟ್ಟು ; ಹೊಳಲು—ಪಟ್ಟಣ ; ಮಣಿಹಾರ—ಅರಮನೆಯ ವಿಚಾರಣಕರ್ತ ; ತದನುಜ್ಞೆಯಲಿ—ಅವರ ಒಪ್ಪಿಗೆಯಿಂದ.

೧೨೬. ಸಾರ—ರಸವತ್ತಾದ, ಉತ್ತಮವಾದ ; ಸಾರಣೆ—ಸಾರಿಸುವಿಕೆ ; ಕುಂಕುಮ—ಕುಂಕುಮ ಕೇಸರ ; ಜವಾಜಿ—ಮೃಗ ಸಂಬಂಧವಾದ ಸುಗಂಧ ದ್ರವ್ಯ ; ಕಾರಣಿ—ಗೋಡೆಯ ತಳ ಭಾಗದಲ್ಲಿ ತೆಗೆಯುವ ಕೆಂಪು ಪಟ್ಟೆ ; ನೆಲಗಟ್ಟು—ಸರಿಮಾಡಿದ ನೆಲ ; ಕೇರಿ—ದೊಡ್ಡ ಬೀದಿ ; ಘನಸಾರ—ಪಚ್ಚ ಕರ್ಪೂರ ; ಹರವು—ಹರಡುವಿಕೆ ; ಚಳೆಯ—ಚಿಮುಕಿಸುವಿಕೆ.

೧೨೭. ಕನಕ—ಚಿನ್ನ ; ವಿಸ್ಫುರಿತ—ಪ್ರಕಾಶಮಾನವಾದ ; ಕಂಡರಣೆಗಳಲಿ—ಕೆತ್ತನೆಯ ಕೆಲಸದಲ್ಲಿ ; ಒಪ್ಪಿರ್ದ—ಅಂದವಾಗಿದ್ದ ;

ರಸುಮಿಪ—ಹೊಳೆಯುವ ; ರಸುಮಿ (ದ್ಭ.)—ರಶ್ಮಿ (ಸಂ.) ; ವಜ್ರ ಧಾರೆ—ವಜ್ರದ ಹೊಳಪು ; ಭ್ರಂಗ—ಅಭ್ರಕ ; ಮುಕುರ —ಕನ್ನಡಿ ; ಉತ್ಕರ—ಸಮೂಹ ; ಭಿತ್ತಿ—ಗೋಡೆ; ಸುರುಚಿರ —ಸುಂದರವಾದ ; ಒಗ್ಗಿನಲಿ—ಒಟ್ಟಿಗೆ.

೧೨೮. ರೋಹಣ ಗಿರಿ—ಒಂದು ಬೆಟ್ಟದ ಹೆಸರು ; ಪುಷ್ಪಕ—ದೇವ ರಥ, ಕುಬೇರನ ವಿಮಾನ ; ರತೀಂದ್ರ—ರತಿಯ ಪತಿಯಾದ ಮನ್ಮಥ ; ನಿಳಯ—ಮನೆ ; ದಿನಕರ—ಸೂರ್ಯ ; ಒಡ್ಡು—ಸಮೂಹ ; ತಳಿತ—ಹರಡಿಕೊಂಡ ; ಸುರ ಚಾಪ—ಕಾಮನ ಬಿಲ್ಲು ; ಸುವ ರ್ಣಾಚಲ—(ಚಿನ್ನದ ಬೆಟ್ಟ), ಮೇರು ಪರ್ವತ ; ತಾರಾ — ನಕ್ಷತ್ರ ; ತಾನು ಇಳೆಗೆ ಇದು ಎನೆ.

೧೨೯. ಸೌರಭಾನ್ವಿತದ—ಸುವಾಸನೆಯಿಂದ ಕೂಡಿದ ; ಆಮ್ರ— ಮಾವಿನ (ಎಲೆ) ; ನವ—ಆಗ ತಾನೆ ಅರಳಿರುವ ; ಮಂದಾರ — ಪಾರಿಜಾತದ ಹೂ ; ಕರ್ಪೂರ ಪೂಗ—ಸುವಾಸನೆಯ ಅಡ ಕೆಯ ಮರ ; ಅಶೋಕಾದಿಗಳ—ಅಶೋಕ ವೃಕ್ಷ ಮೊದ ಲಾದುವುಗಳ ; ವಾರಿಜ ಉತ್ಪಲದರಲ—ಕಮಲ ಮತ್ತು ಕನ್ನೈದಿಲೆ ಹೂಗಳನ್ನು ; ಹೊದಕೆಯ ಸೇರಿಸಿದ—ಹೊದ್ದಿಸಿ ಮಾಡಿರುವ ; ಬಲ್ಲಾಳದಡ್ಡಿಗಳು—ತಡಿಕೆಗಳು ; ಓರಣದಿ— ಸಾಲಾಗಿ.

೧೩೦. ಸಂಕುಲ—ಸಮೂಹ ; ವಿಸ್ತರದೊಳು—ಅತಿಶಯದಲ್ಲಿ.

೧೩೧. ನಗರಾಂತರ—ಇತರ ಪಟ್ಟಣಗಳು ; ಭರವಸದಿ—ಬೇಗನೆ ; ಬಹುದು—ಬರುವುದು ; ಉಬ್ಬರಿಸಿ—ಗಟ್ಟಿಯಾಗಿ.

೧೩೨. ಚಾತುರ್ಬಲ—ಆನೆ, ಕುದುರೆ, ರಥ, ಪದಾತಿ ಎಂಬ ಸೈನ್ಯದ ನಾಲ್ಕು ಅಂಗಗಳು ; ಧರೆ—ಭೂಮಿಯು ; ರಸಾತಲಕೆ— ಪಾತಾಳಕ್ಕೆ ; ಅದ್ದುದು—(ಮುಳುಗಿತು), ಕುಸಿದು ಹೋಯಿತು ; ಆಶಾ ಕರಿಗಳು—ದಿಗ್ಗಜಗಳು ; ಒರಗಿದುವು— ಮಲಗಿದುವು ; ಉರಗ ಪತಿ—ಆದಿಶೇಷ ; ತಲೆಬಾಗಿದನು ; ತದ್ಭರದೊಳು—ಆ ಭಾರದಿಂದ ; ಆ ಕಮಠೇಂದ್ರನ ಎದೆ

ನೆರೆ ಬಿರಿದುದು ; ಕವುಠ—ಆವೆ ; ಎನಲು—ಎನ್ನುವಂತೆ ; ಉಗ್ಗಡದಿ—ಉತ್ಕಟ (ಸಂ.), ಬಿರುಸಾಗಿ ; ಕಟಕ—ಸೈನ್ಯ.

೧೩೩. ತೆರಹ—ತೆರಪನ್ನು, ಅವಕಾಶವನ್ನು ; ಸಮ್ಮುಖ ಮುಖಾ—(ದೊರೆಯ) ಎದುರು ಬಿಡಿ ; ಉರುಬಿ—ಬಿರುಸಾಗಿ ; ಕನಕ ದಂಡೋದ್ಧರರು—ಚಿನ್ನದ ದೊಣ್ಣೆಗಳನ್ನು ಮೇಲಕ್ಕೆತ್ತಿ ಹಿಡಿದು ಕೊಂಡಿರುವವರು ; ಉಲಿಯೆ—ಕೂಗಲು ; ಗಮಕಿ—ಕಾವ್ಯ ಗಳನ್ನು ಸಭ್ಯರಿಗೆ ಇಂಪಾಗುವಂತೆ ಓದುವವನು ; ವಾಗ್ಮಿ—ಸಭ್ಯರು ಮೆಚ್ಚುವಂತೆ ಮಾತನಾಡುವವನು ; ಐದೆ—ಹೆಚ್ಚಾಗಿ ; ಭಟ್ಟರು (ಹೊಗಳು ಭಟ್ಟರು) ಅರರೆ........ಎಂದು ಅಬ್ಬರಿಸೆ, ಭೂಸುರಾವಳಿ ಮಂತ್ರಾಕ್ಷತೆಗಳಿಂದ ನೆರೆಯೆ, ಅವನಿಪರು ಐತಂದರು.

೧೩೪. ಕೆಲರೊಳು—ಕೆಲವರಲ್ಲಿ ; ಒಬ್ಬೊಬ್ಬರ ಸುತೇಜ, ಐಶ್ವರ್ಯ, ಬಲ, ಸೌಂದರಿಯ, (ಇವನ್ನು) ಈಕ್ಷಿಸಿ ನೆರೆ ಮನಗುಂದಿ ನಾವು ಇಂದು ಮರಳಬೇಕು (ಹಿಂದಿರುಗಬೇಕು), ಈ ಭೂಮಿ ಪಾಲಕರು ಇರಲು ನಮ್ಮನು ಅದಾರು ಅರಿವರು ? ಜರಿದು —ಹಿಂದೆ ಬಿದ್ದು ; ಒಳಸರಿಯ ಬಗೆದರು—ಹಿಂದಕ್ಕೆ ಹೋಗ ಬೇಕೆಂದೆಣಿಸಿದರು.

೧೩೫. ಮರಳಲು—ಹಿಂದಕ್ಕೆ ಹೋಗುವುದಕ್ಕೆ ; ಅನುಗೆಯ್ದು—ಸಿದ್ಧ ಮಾಡಿಕೊಂಡ ; ಶಂಬರ ವಿರೋಧಿ—(ಶಂಬರಾಸುರನ ಶತ್ರು), ಮನ್ಮಥ ; ಎದೆ ಜರಿದು—ಮನ ಸೋತು ; ಮುನ್ನ—ಹಿಂದೆ ಯೇ ; ಸರೋಜ ಭವ—ಬ್ರಹ್ಮನು; ಭಾಳ—ಫಾಲ (ಸಂ.), ಹಣೆ ; ಒರಸಲು—ಅಳಿಸಲು ; ಅರಳವು—ಯಾರಿಗೆ ಸಾಧ್ಯವು ? ಅನುಕರಿಸಿದಪಳೋ—ಅನುಕೂಲೆಯಾಗುವಳೋ ; ಒಸೆದು—ಸಂತೋಷದಿಂದ ; ಮಗುಳದೆ—ಹಿಂದಿರುಗದೆ.

೧೩೬. ವಿಭವದಿ—ಬೆಡಗಿನಿಂದ ; ಪರದ—ವರ್ತಕನು ; ಹವಣರಿದು —ಯೋಗ್ಯತೆಯನ್ನು ತಿಳಿದು ; ಅರಸುಗಳ(ನ್ನು); ಬಿಡಿಸಿ—

(ಬಿಡದಿಗಳಲ್ಲಿ) ಇಳಿಸಿ; ಬಳಿಕ; ನಾಂದೀಮುಖ—ಮದುವೆಗೆ ಮೊದಲಿನಲ್ಲಿ ಮಾಡಬೇಕಾದ ಕರ್ಮ; ಒಂದಿಸಿದನು—ನಡೆಯಿಸಿದನು.

೧೩೭. ಭೂಮಿ ಸುರ—ಬ್ರಾಹ್ಮಣ; ಪೂರ್ವ ವೇದಿ—ಹೋಮ ಮಾಡತಕ್ಕ ಜಗುಲಿ; ಅಂಬುರುಹ—ಕಮಲ; ಸುಭಾಗ್ಯದ ಅಬ್ಧಿಯ ಸಿರಿಯು—ಸೌಭಾಗ್ಯ ಸಮುದ್ರದಲ್ಲಿ ಹುಟ್ಟಿದ ಲಕ್ಷ್ಮಿಯು; ಪರಿಣಯ—ಮದುವೆ.

೧೩೮. ಡಂಗುರವ ಎಸಗಿ—ಡಂಗುರ ಹೊಯ್ಸಿ; ಲಸತ್—ಪ್ರಕಾಶಮಾನವಾದ; ಪೀಯೂಷ—ಅಮೃತ; ಪರಮ ಸೌಭಾಗ್ಯದ ................ಕೃತಾರ್ಥರಹುದು—ಅತ್ಯಂತ ಸೌಭಾಗ್ಯದಿಂದ ಕೂಡಿದ ವೈಭವವನ್ನು ನೋಡಿ ಆನಂದಪಡಲು ಬೇಗ ಬನ್ನಿರಿ; ಅಬಲಾ ಮಣಿ—ಸ್ತ್ರೀಯರಲ್ಲಿ ರತ್ನದಂತಿರುವ ಗಂಧರ್ವದತ್ತೆ; ಸಡಗರ—ವೈಭವ.

೧೩೯. ಚಾತಕ—ಚಾತಕ ಪಕ್ಷಿ; ನೂತನ ಅಂಗೋದ್ಭವ—ಹೊಸ ಮನ್ಮಥ; ಕೈಗೆಯ್ದು—ಸಿಂಗರಿಸಿಕೊಂಡು; ಆ ತತ್‌ಕ್ಷಣ—ಒಡನೆಯೇ; ಮಂಟಪ—ವಿವಾಹ ಮಂಟಪ.

೧೪೦. ಶರಧಿ—ಸಮುದ್ರವು; ರತ್ನ ಸ್ತೋಮದಿಂದ—ರತ್ನಗಳ ರಾಶಿಯಿಂದಲೂ; ಅಂಬರ—ಆಕಾಶ; ಭಗಣಾನೀಕ—ನಕ್ಷತ್ರಗಳ ಸಮೂಹ; ವಿಸ್ಫುರಿತ—ಪ್ರಕಾಶಮಾನವಾದ; ಮೇರು—ಮೇರು ಪರ್ವತವು; ಸುರದ್ರುಮಾವಳಿ—ಕಲ್ಪವೃಕ್ಷಗಳ ಸಾಲು; ಕಾಸಾರ—ಸರಸ್ಸು, ಕೊಳ; ಮರಾಳ—ಹಂಸ.

೧೪೧. ಶೃಂಗಾರಾನ್ವಿತದಿ—ಅಲಂಕಾರಗಳಿಂದ ಕೂಡಿ; ಗಜೇಂದ್ರನ ನಡರಿ—ಉತ್ತಮವಾದ ಆನೆಯನ್ನೇರಿ; ಜಿತ ಶಂಬರ—ಮನ್ಮಥ; ಅರಮನೆಯ—ಅರಮನೆಯನ್ನು; ಹೊರವಟ್ಟನು—ಹೊರಟನು.

೧೪೨. ಅಂಗಜ ನಿಭ—ಮನ್ಮಥನಿಗೆಣೆಯಾದ; ಅಭವ—ಹುಟ್ಟಿಲ್ಲದ;

ಅಭಿನವ—ಹೊಸ ; ನಿಚಯ—ಸಮೂಹ ; ಸುಭಗ—ಸಂಪದ್ಯುಕ್ತನಾದ.

೧೪೩. ಆ ಪರಿಯಿಂ—ಆ ರೀತಿಯಲ್ಲಿ ; ಘೋಷವತಿ—(ವೀಣೆಯ ಹೆಸರು) ; ವಿಪಂಚಿ—(ಐದು ತಂತಿಗಳುಳ್ಳ) ವೀಣೆ ; ನಿಚಯ—ಸಮೂಹ ; ನೆರಹಿ—ಇರಿಸಿ.

೧೪೪. ಭಾಸುರದೊಳು—(ಪ್ರಕಾಶಮಾನವಾಗಿ), ಮೆರೆಯುವಂತೆ ; ಧರಣೀ ಸುರ—ಬ್ರಾಹ್ಮಣ; ನೆರೆದು—ಸೇರಿ ; ಅರ್ಚಿಸಲು—ಪೂಜೆಮಾಡಲು ; ಕಲಾ—ಕುಶಲ ವಿದ್ಯೆ ; ಮಾಗಧರು—ಸ್ತುತಿ ಪಾಠಕರು ; ವಾದಿಗಳು—ವಾಗ್ವಾದ ಮಾಡುವವರು ; ಮುಸುಕಿತು—ಮುಸುಕಿದರು, ತುಂಬಿದರು ; ಚಾರು—ಅಂದವಾದ.

೧೪೫. ಭಟ—ಸೈನಿಕ ; ಪಿದ್ವಾನು—ವಿದ್ವಾನ್, ಪಂಡಿತ ; ವಾಕ್ಪಟುಯುತರು—ಚಾತುರ್ಯದಿಂದ ಮಾತಾಡುವ ಶಕ್ತಿಯುಳ್ಳವರು ; ಪಾಠಕರು—ಓದುವವರು ; ವಿಬುಧೋತ್ಕಟ ವಿಶಾರದರು—ಅತ್ಯುತ್ತಮ ಪಾಂಡಿತ್ಯವುಳ್ಳವರು ; ವಿಬುಧ—ಪಿದ್ವಾಂಸ ; ಉತ್ಕಟ—ಅತಿಶಯವಾದ ; ವಿಶಾರದ—ಪಂಡಿತ ; ಅಮಳ—ಪರಿಶುದ್ಧವಾದ ; ವಿಟ—ಸ್ತ್ರೀಲೋಲ ; ವಿದೂಷಕ—ಹಾಸ್ಯಗಾರ ; ಪೀಠಮರ್ದನ—ದೊರೆಯ ಮನಸ್ಸಿನ ಬೇಸರವನ್ನು ವಿನೋದ ಮೊದಲಾದುವುಗಳಿಂದ ಕಳೆಯುವುದಕ್ಕಾಗಿ ನಿಯಾಮಕವಾದ ಅಧಿಕಾರಿ; ಗಮಕಿ—(ಪದ್ಯ ೧೩೩) ; ಸಂಕಟಿಸಿ—ಸಂಘಟನ (ಸಂ), ಒಟ್ಟುಗೂಡಿ; ಮೆರೆದುದು—ಶೋಭಿಸಿದರು.

೧೪೬. ಮೇಲೆ—ಅಂತರಿಕ್ಷದಲ್ಲಿ ; ಕಿನ್ನರ........ಸಾಧ್ಯ ಆಳಿ (ಸಮೂಹ) ವರ ಮನು ಗಣಾಧಿಪರು ಮೇಣ್ (ಮತ್ತು); ಗಣಧರರು—ಅನೇಕ ದೇವಜಾತಿಗಳವರು; ತಾರಾ—ನಕ್ಷತ್ರ ; ಸುರಾಂಗನೆ—ದೇವತಾ ಸ್ತ್ರೀ.

೧೪೭. ಈ ಪದ್ಯದಲ್ಲಿ ತರುಣಿಯರ ನರ್ತನೆಯನ್ನು ವರ್ಣಿಸಿದೆ
ರಸ ಸ್ಥಾಪನೆ—ನವ ರಸಗಳ ಪ್ರದರ್ಶನ ; ಹಸ್ತಾ......
ಅಕ್ಷಿ ಪ್ರಸರದ—ಕೈ ಕಣ್ಣು ಮೊದಲಾದುವನ್ನು ತಿರುಗಿಸು

ವಿಕೆಯು ; ಸಾತ್ವಿಕಾಂಗ—ಸ್ವಾಭಾವಿಕವಾಗಿ ಮನೋಭಾವಗಳನ್ನು ತಿಳಿಸುವಿಕೆ ; ಸುಗತಿ ವಿಭ್ರಮ—ಒಳ್ಳೆಯ ನಡೆಯ ಸೊಬಗು ; ಸ್ಥಿರ........ಕಳಾಪ—ನರ್ತನದ ವಿಧ ವಿಧವಾದ ರೀತಿಗಳು.

೧೪೮. ಲಲಿತ—ಮನೋಹರವಾದ ; ಮೃದಂಗ—ಮದ್ದಲೆ ; ನಟವ್ರಜದ—ನಾಟ್ಯಗಾರರ ಗುಂಪಿನ ; ಉಲುಹು—ಧ್ವನಿ ; ಕಹಳೆ—ತುತೂರಿಯು ; ಆರಾವ—ಶಬ್ದ ; ಗೀತ—ಸಂಗೀತ ; ಕಾಂತಾವಳಿ—ಸ್ತ್ರೀ ಸಮೂಹ ; ಕಂಕಣ—ಕೈ ಬಳೆ ; ನೂಪುರ—ಕಾಲ್ಕಡಗ.

೧೪೯. ಚಾರು—ಮನೋಹರವಾದ ; ವಿತತ—ವಿಸ್ತಾರವಾದ ; ಲಸತ್—ಪ್ರಕಾಶಮಾನವಾದ ; ಸುಧೆ—ಅಮೃತ ; ತ್ರೈಲೋಕ್ಯ—ಸ್ವರ್ಗ, ಮರ್ತ್ಯ, ಪಾತಾಳ, ಈ ಮೂರು ಲೋಕಗಳ ; ಸಾರ ಅಸಾರ ; ತೂರ್ಯ ತ್ರಯ—ಸಂಗೀತ, ನರ್ತನ, ವಾದ್ಯ, ಇವುಗಳ ಸಮ್ಮೇಳನ ; ಮೇಳಾಪ ಪ್ರಸೌಖ್ಯ—ಹೊಂದಿಕೆಯಾಗಿ ಸೇರುವುದರಿಂದುಂಟಾಗುವ ಆನಂದ.

೧೫೦. (೭೯ನೆಯ ಪದ್ಯಕ್ಕೆ ಕೊಟ್ಟಿರುವ ಅರ್ಥವನ್ನು ನೋಡಿರಿ.)

---